

ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – 583276

2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಅಮುಗೆರಾಯಮ್ಮನ ವಚನಗಳು

ನಿಬಂಧಕಾರರು


ಕವಿತ ಕೆ.ಎಸ್.

ನೋಂದಣಿ ಸಂಖ್ಯೆ – KVTM/K 140901030086

ಕನ್ನಡ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು


ಮಾರ್ಗದರ್ಶಕರು


ಡಾ. ಡಿ.ಸುಮಂಗಳ

ಕನ್ನಡ ಸಹ ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು

ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು





ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

2014–15





ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583276

2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಅಮುಗೆರಾಯಮ್ಮನ ವಚನಗಳು

ನಿಬಂಧಕಾರರು

**ಕವಿತ ಕೆ.ಎಸ್.**

ನೋಂದಣಿ ಸಂಖ್ಯೆ – KVTM/K 140901030086
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಡಿ.ಸುಮಂಗಳ**

ಕನ್ನಡ ಸಹ ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

2014–15

# ಅಭ್ಯರ್ಥಿಯ ಘೋಷಣಾ ಪತ್ರ

**"ಅಮುಗೆರಾಯಮ್ಮನ ವಚನಗಳು"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ: KVTM/K 140901030086ರ ವಿದ್ಯಾರ್ಥಿಯಾದ ನಾನು ೨೦೧೪-೧೫ನೇ ಸಾಲಿನ ಪರೀಕ್ಷೆಗಾಗಿ **ಡಾ. ಡಿ.ಸುಮಂಗಳ, ಕನ್ನಡ ಸಹ ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮೋ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

K.S. [signature]

ಮೈಸೂರು
ದಿನಾಂಕ: ೧೮-೦೭-೨೦೧೫

(ಕವಿತ ಕೆ.ಎಸ್.)
೨೦೧೪-೧೫ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಮಾರ್ಗದರ್ಶಕರ ಪ್ರಮಾಣಪತ್ರ

೨೦೧೪-೧೫ನೇ ಸಾಲಿನಲ್ಲಿ ಕ್ರಮ ಸಂಖ್ಯೆ: KVTM/K 1409010300086ರ ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಕವಿತ ಕೆ.ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ **"ಅಮುಗೆರಾಯಮ್ಮನ ವಚನಗಳು"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೧೮-೦೭-೨೦೧೫

(ಡಾ. ಡಿ.ಸುಮಂಗಳ)
ಮಾರ್ಗದರ್ಶಕರು
ಕನ್ನಡ ಸಹ ಪ್ರಾಧ್ಯಾಪಕರು
ಮತ್ತು ವಿಭಾಗದ ಮುಖ್ಯಸ್ಥರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಮೈಸೂರು

## ಪರಿವಿಡಿ

# ಅಮುಗೆರಾಯಮ್ಮನ ವಚನಗಳು



* * * * *

# ಪ್ರಸ್ತಾವನೆ

ಸುದೀರ್ಘವಾದ ಎರಡೂವರೆ ಸಾವಿರ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯದಲ್ಲಿ 'ವಚನಸಾಹಿತ್ಯ' ಒಂದು ನಿರ್ಣಾಯಕ ಘಟ್ಟ. ಕ್ರಿ.ಶ. ೧೨ನೇ ಶತಮಾನದಲ್ಲಿ ಪ್ರಾರಂಭಗೊಂಡ ಈ ಸಾಹಿತ್ಯ ಕೇವಲ ಸಾಹಿತ್ಯಿಕ ದೃಷ್ಟಿಯಿಂದ ಮಾತ್ರವಲ್ಲದೆ ಸಾಮಾಜಿಕ, ಧಾರ್ಮಿಕತೆಯ ದೃಷ್ಟಿಯಿಂದ, ರಾಜಕೀಯವಾಗಿಯೂ ಈ ಚಳುವಳಿ ಆಳುವ ವರ್ಗಕ್ಕೆ ಎಚ್ಚರಿಕೆಯ ಗಂಟೆಯಾಯಿತು. ಸಾಮಾಜಿಕ ಅಸಮಾನತೆಯ ಸಂದಿಗ್ಧ ಪರಿಸ್ಥಿತಿಯಲ್ಲಿ 'ಬಸವಣ್ಣ' ಕ್ರಾಂತಿಯ ರೂವಾರಿಯಾದರು. ಆ ಕಾಲದ ಜಾತಿ ಅಸಮಾನತೆ, ಲಿಂಗ ಅಸಮಾನತೆ, ಜೊತೆಗೆ ಉಳ್ಳವರು, ಪಂಡಿತರೆಂಬುವರ ಅಹಂ ಮುರಿಯಲು ಈ ವಚನ ಚಳುವಳಿ ಪ್ರಾರಂಭವಾಯಿತು. ಬಸವಣ್ಣನವರ 'ಇಷ್ಟಲಿಂಗ'ದ ಕಲ್ಪನೆ ಜಗಜ್ಜಾಹಿರವಾಯಿತು. ಅಸಂಖ್ಯಾತ ಜನಶರಣರು ಕಲ್ಯಾಣವನ್ನರಸುತ್ತ ಬಂದರು. ಅವರೆಲ್ಲರೂ ಸಕ್ರಿಯವಾಗಿ ಕ್ರಾಂತಿಯಲ್ಲಿ ಧುಮುಕಿದರು. ಅನುಭವ ಮಂಟಪದಲ್ಲಿ ಶಿವಶರಣರೆಲ್ಲ ಸೇರಿ ಚರ್ಚೆ, ಸಂವಾದದಲ್ಲಿ ತೊಡಗುತ್ತಿದ್ದರು. ಎಲ್ಲಾ ವರ್ಗದ ಜನ ಸೇರಿ ಸಹಪಂಕ್ತಿ ಭೋಜನ ಮಾಡುತ್ತಿದ್ದರು. ಕಾಯಕದೊಂದಿಗೆ ಆಧ್ಯಾತ್ಮಿಕ ಔನ್ನತ್ಯಕ್ಕೆ ಏರಿದರು. ಮೇಲುಕೀಳೆಂಬ ತರತಮ ಭಾವ ಹೋಗಿ ತಾವೆಲ್ಲ ಒಂದೇ 'ಶರಣ'ರೆಂಬ ವಿನೀತ ಭಾವ ಎಲ್ಲರಲ್ಲೂ ಆವರಿಸಿತು.

ಈ ಬದಲಾವಣೆ ಆಳುವ ವರ್ಗಕ್ಕೆ ಬೇಕಿರಲಿಲ್ಲ. ಆಷಾಢಭೂತಿಗಳು ರಾಜನ ಕಿವಿ ಚುಚ್ಚಿದರು. ಪುರೋಹಿತಶಾಹಿ ವರ್ಗಗಳೆಲ್ಲ ಒಂದಾಗಿ ಶರಣರ ಭಾವನೆಗೆ ಧಕ್ಕೆ ತಂದರು. ಪರಿಣಾಮ ಶರಣರೆಲ್ಲಾ ತಮ್ಮ ಅಮೂಲ್ಯ ಗ್ರಂಥ ವಚನಗಳೊಂದಿಗೆ ಕಲ್ಯಾಣ ತ್ಯಜಿಸಬೇಕಾಯಿತು. ಜಗತ್ತಿನಲ್ಲಿ ಮೊಟ್ಟಮೊದಲ ದೀನದಲಿತರ ಚಳುವಳಿ ಯಶಸ್ವಿಯಾಗದೇ ಹೋಯಿತಾದರೂ, ಕಿಚ್ಚಿನ ಕಾವನ್ನು ಮಾತ್ರ ಕಳೆದುಕೊಳ್ಳಲಿಲ್ಲ. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಜನಪದ ಸಾಹಿತ್ಯದಲ್ಲಿ ಮಾತ್ರ ಕಾಣಿಸಿಕೊಂಡ ಸ್ತ್ರೀಯರು ಅನಂತರ ಮರೆಯಾಗುತ್ತಾರೆ. ಅವರ ಅಸ್ತಿತ್ವದ ದಾಖಲೆ ಸಾಹಿತ್ಯದಲ್ಲಿ ವಚನಕಾರರ ಆಗಮನದವರೆವಿಗೂ ಕಾಣಸಿಗುವುದಿಲ್ಲ. ಶತಮಾನಗಳಿಂದಲೂ ಮೂಕವಾಗಿಯೇ ಉಳಿದಿದ್ದ ಮಹಿಳೆಯರಿಗೆ ಮೊಟ್ಟಮೊದಲಿಗೆ ಅಭಿವ್ಯಕ್ತಿ ಸ್ವಾತಂತ್ರ್ಯ ನೀಡಿದವರು ವಚನಕಾರರು. ಕೇವಲ ಕೌಟುಂಬಿಕ ಘಟಕಕ್ಕೆ ಮಾತ್ರ ಸೀಮಿತವಾಗಿದ್ದ ಮಹಿಳೆಯರಿಗೆ ಆಧ್ಯಾತ್ಮಿಕ ಉನ್ನತಿ ಸಾಧ್ಯವಿದೆ ಎಂದು ತೋರ್ಪಡಿಸಿ ಅಸಂಖ್ಯಾತ ಮಹಿಳೆಯರು ವಚನ ಚಳುವಳಿಗೆ ಧುಮುಕಿದರು.

ಅವರಲ್ಲಿ ಪ್ರಮುಖರೆಂದರೆ ಅಕ್ಕಮಹಾದೇವಿ, ಸತ್ಯಕ್ಕ, ಬೊಂತಾದೇವಿ, ಅಕ್ಕಮ್ಮ, ನಾಗಲಾಂಬಿಕೆ, ಕಾಳವ್ವೆ ಮುಂತಾದವರು. ಇವರೆಲ್ಲಾ ತಮ್ಮ ಸಾಧನೆಯಿಂದ ಉನ್ನತಿಗೇರಿದವರು. ಅವರಲ್ಲಿ ಅಮುಗೆರಾಯಮ್ಮ ಕೂಡ ಒಬ್ಬರು. ಈಕೆಯ ೧೧೩ ವಚನಗಳು ಲಭ್ಯವಿದ್ದು; ವಚನಗಳ ವಿಚಾರಗಳನ್ನು ಅರಿಯುವ ಪ್ರಯತ್ನವನ್ನು ಈ ನಿಬಂಧನೆಯಲ್ಲಿ ಮಾಡಲಾಗಿದೆ.

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಓದಿದರೆ ಗದ್ಯವಾಗುವ; ಹಾಡಿದರೆ ಹಾಡಾಗುವ ಸ್ವರೂಪ ಹೊಂದಿರುವ 'ವಚನ' ಎಂದರೆ 'ಪ್ರಮಾಣ', 'ಮಾತು' ಎಂದರ್ಥ. 'ವಚನ' ಎಂಬ ಪದ ಮೂಲತಃ ಸಂಸ್ಕೃತ ಪದವಾಗಿದ್ದು ಕನ್ನಡದಲ್ಲಿ ಪ್ರವೇಶ ಪಡೆದುಕೊಂಡಿದೆ. ಇದು 'ಸಾಹಿತ್ಯದ ಒಂದು 'ರೂಪ' ಅಥವಾ 'ಪ್ರಕಾರ' – ಎಂಬರ್ಥವನ್ನು ಪಡೆದುದು ಕನ್ನಡದಲ್ಲಿಯೇ. ಕಿಟ್ಟೆಲ್ಲರು ತಮ್ಮ ನಿಘಂಟಿನಲ್ಲಿ 'ವಚನ' ಪದದ ಅರ್ಥವನ್ನು ಎಲ್ಲಿಯೂ ಉಲ್ಲೇಖಿಸದಿದ್ದುದು ಆಶ್ಚರ್ಯವೆನ್ನಬಹುದು. ಅದು ಮೂಲತಃ ನುಡಿ, ನುಡಿಗಡಣ, ಉಕ್ತಿ, ಮಾತು ಎಂಬರ್ಥಗಳನ್ನು ಒಳಗೊಂಡಿದ್ದು, ಅನಂತರ ಅದು ವಿಶಾಲಾರ್ಥವನ್ನು ಶಿವಶರಣರಿಂದ ಪಡೆದುಕೊಂಡಿತು. ಉದಾಹರಣೆಗೆ 'ವಚನದ ಹುಸಿನುಸುಗಳೆಂತು ಮಾಬುದೆನ್ನ. 'ಗುರುವಚನವಲ್ಲದೆ ಲಿಂಗವೆಂದಿನಿಸದು; 'ಇಂತೆಂದುದು ಕೂಡಲಸಂಗನವಚನ"[೧]

ಚಂಪೂಸಾಹಿತ್ಯದ ಭದ್ರಬುನಾದಿ ಹೊಂದಿದ್ದ ಕನ್ನಡ ಸಾಹಿತ್ಯ ಆ ಶಿಷ್ಟ ಗ್ರಂಥಸ್ಥ ಭಾಷೆ ಬಿಟ್ಟು, ಜನಸಾಮಾನ್ಯರ ಆಡುಭಾಷೆಗೆ ಬರಲು ಶರಣರ ಚಳುವಳಿಯವರೆಗೂ ಕಾಯಬೇಕಾಯಿತು. ವಚನಕಾರರು ಸಮಾಜದ ಅಂದಿನ ಎಲ್ಲಾ ತಳಸಮುದಾಯ ವರ್ಗದವರನ್ನು ಒಳಗೊಂಡಿದ್ದು ಕುಂಬಾರ, ಚಮ್ಮಾರ, ಅಂಬಿಗ, ಮಡಿವಾಳ, ಇನ್ನೂ ಮುಂತಾದ ಕುಲಕಸುಬು ಹೊಂದಿದವರನ್ನು ಒಳಗೊಂಡು ಕೆಳಹಂತದವರ, ದೀನದಲಿತರ ಪರವಾದ ಚಳುವಳಿಯಾದ್ದರಿಂದ ಕೆಳವರ್ಗದವರೆಲ್ಲರ ಭಾಷೆಯಾದ ಆಡುಭಾಷೆಯೇ ವಚನಗಳ ಮೂಲಭಾಷೆಯಾಯಿತು. ಹಾಗಾಗಿ ಸಾಮಾನ್ಯ ವ್ಯಕ್ತಿಯು ನಿರ್ಭೀತಿಯಿಂದ ತನ್ನ ಅನುಭವದ ಸಾರವನ್ನು ಹೇಳುತ್ತಿದ್ದು, ಜನರಿಗೆ ಅದು ಬಹಳ ಬೇಗ ತಲುಪುತ್ತಿತ್ತು. ಓದುಬರಹ ಬಾರದವರೂ ತಮ್ಮ ಅನುಭಾವದ ಹಿನ್ನೆಲೆಯಲ್ಲಿ ವಚನ ರಚನೆಯಲ್ಲಿ ತೊಡಗಿದರು. ಪರಿಣಾಮವೇ ಇಪ್ಪತ್ತು ಸಾವಿರಕ್ಕೂ ಮೇಲ್ಪಟ್ಟ ಇನ್ನೂರಐವತ್ತು ಜನರಿಗೂ ಹೆಚ್ಚು ಶರಣರ ವಚನಗಳು ಉಪಲಬ್ಧವಾಗಿವೆ. "ಅರಿತರೆ ಶರಣ, ಮರೆತರೆ ಮಾನವ" ಎಂಬ ಸಂದೇಶ ಸಾರಿದ ವಚನ ನಮ್ಮೆಲ್ಲರ ಆಸ್ತಿ. ಪುರೋಹಿತಶಾಹಿಗಳಿಂದ, ಮೌಢ್ಯರಿಂದ ಪ್ರಚಾರಗಳಿಸಿಕೊಂಡಿದ್ದ ಸಂಪ್ರದಾಯಗಳನ್ನು ವಚನಕಾರರು ಪ್ರಶ್ನಿಸಿದರು.

---

೧. ಡಾ. ಎಸ್.ಎನ್.ಚಿಕ್ಕಮಾದು – ವಚನಸಾಹಿತ್ಯ ಮತ್ತು ದಾಸಸಾಹಿತ್ಯಗಳ ಸಮೀಕ್ಷೆ, ಪ್ರಸಾರಾಂಗ, ಕರಾಮುವಿವಿ, ೨೦೧೧

ವಚನಕಾರರು ವೈದಿಕ ಸಂಪ್ರದಾಯದ ಡಂಬಾಚರಣೆಯ ವಿರುದ್ಧ ಹೋರಾಡಿದರೇ ಹೊರತು ವೈದಿಕರ ವಿರುದ್ಧವಲ್ಲ. "ಶರಣಸಂಸ್ಕೃತಿ ಇಡೀ ಜಗತ್ತಿನಲ್ಲಿ ಎಲ್ಲೂ ಕಂಡರಿಯದಂಥ ಅದ್ಭುತ ಸಂಸ್ಕೃತಿ. ಇದು ಸರ್ವಕಾಲದಲ್ಲೂ ಸರ್ವರಿಗೂ ಅನ್ವಯಿಸುವ ಸಕಾರಾತ್ಮಕ ಸಂಸ್ಕೃತಿ. ಶರಣ 'ಸಂಸ್ಕೃತಿ'ಯ 'ಸ'ನಿಂದ ಸಮಾನತೆ, ಸಮಪಾಲು, ಸಮಬಾಳ್ವೆ, 'ಕೃ'ನಿಂದ ಕೃತಿಯಲ್ಲಿ ಸತ್ಯಶುದ್ಧಕಾಯಕದ ಪ್ರವೃತ್ತಿ ಪ್ರತಿಪಾದಿಸುವ; 'ತಿ'ನಿಂದ ತಿದ್ದಿ ತೀಡಿ ಹಸನಾದಿ ಸಮಾಜನಿರ್ಮಿಸುವ ಸಂದೇಶವಿದೆ" ಎಂದು ಡಾ. ವಿಜಯಲಕ್ಷ್ಮೀ ಬಾಳೇಕುಂದ್ರಿ ಅಭಿಪ್ರಾಯಪಟ್ಟಿದ್ದಾರೆ.[೧]

ವಚನಕಾರರು ಜನಸಾಮಾನ್ಯರು ಸ್ಥಿರವೆಂದುಕೊಂಡಿರುವ ದೇವಾಲಯದ ನಿರ್ಮಾಣದ ಬಗ್ಗೆ ಅವರಿಗೆ ಒಲವಿಲ್ಲದೆ, "ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ" ಎನ್ನುತ್ತಾರೆ. ಬಸವಣ್ಣನವರು "ಎನ್ನ ಕಾಲೇ ಕಂಬ ದೇಹವೇ ದೇಗುಲ ಶಿರಹೊನ್ನ ಕಳಸವಯ್ಯ" ಎಂದು ಅಭಿಪ್ರಾಯಪಟ್ಟಿದ್ದಾರೆ.

"ದೇಹದೊಳಗೆ ದೇವಾಲಯವಿದ್ದು
ಮತ್ತೆ ಬೇರೆ ದೇಗುಲವೇಕಯ್ಯಾ?
ಎರಡಕ್ಕೆ ಹೇಳಲಿಲ್ಲಯ್ಯಾ
ಗುಹೇಶ್ವರಾ, ನೀನು ಕಲ್ಲಾದಡೆ ನಾನೇನಪ್ಪೆನು"[೨]

'ಅನುಭವಮಂಟಪ'ವೆಂಬುದು ಜಗತ್ತಿನ ಮೊಟ್ಟಮೊದಲ ಪಾರ್ಲಿಮೆಂಟ್. ಇದು ಚಿಂತನೆಯೂ ಮಾತಿನ ಮಂಥನದ ಕಟ್ಟೆಯೂ ಆಗಿದೆ. "ಅನುಭವ ಮಂಟಪವು ಸಮಾಜದ ಎಲ್ಲ ವರ್ಗದ ಜನರಿಗೆ ತೆರೆಯಲ್ಪಟ್ಟಿತ್ತು. ನಿರ್ಭಿಡೆಯಿಂದ ಎಲ್ಲ ಬಗೆಯ ಚರ್ಚೆಗೆ ಆಸ್ಪದಮಾಡಿಕೊಟ್ಟಿತ್ತು. ಇದರಿಂದಾಗಿ ಭೇದಭಾವವಿಲ್ಲದೆ ನೂರಾರು ಶರಣರು ಒಂದೆಡೆ ಸೇರಿ ತಮ್ಮ ಅನುಭವ, ಅನಿಸಿಕೆಗಳನ್ನು ಹಂಚಿಕೊಳ್ಳಲು ವಿಚಾರ ವೇದಿಕೆಯೊಂದು ನಿರ್ಮಾಣಗೊಂಡಿತು. ಹೀಗೆ ವ್ಯಕ್ತಿವ್ಯಕ್ತಿಗಳ ಮಟ್ಟದಲ್ಲಿ ಆರಂಭಗೊಂಡ ಈ ವ್ಯವಸ್ಥೆ ಬಸವನಕಾಲಕ್ಕೆ ಸಾಮೂಹಿಕ ಕೈಂಕರ್ಯವಾಗಿ ಪರಿಗಣಿತವಾಯಿತು. ವಿಚಾರ ವೇದಿಕೆಯಿಂದ ಹೊರಬಿದ್ದ ನಿರ್ಣಯಗಳಿಗೆ ಶರಣರು ಬದ್ಧರಾಗಿರುತ್ತಿದ್ದರು. ಈ ನಿರ್ಣಯದ ಚೌಕಟ್ಟಿನಲ್ಲಿ ಬರುವ ಆಚಾರವಿಚಾರಗಳನ್ನು ತಮ್ಮಲ್ಲಿ ಅಳವಡಿಸಿಕೊಳ್ಳುವುದು ಹಾಗೂ ವಚನ ರಚನೆಗಳ

---

೧. ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ, ಸಮಾಜವಿಕಾಸಕ್ಕೆ ಶರಣ ಸಂಸ್ಕೃತಿ, ೨೦೧೩
೨. ಅಲ್ಲಮಪ್ರಭುದೇವರ ವಚನ ಸಂಪುಟ, ಸಂಪಾದಕ: ಡಾ. ಬಿ.ವ್ಹಿ.ಮಲ್ಲಾಪುರ, ಪುಟ. ೬೭, ವಚನ ೨೧೨

ಮೂಲಕ ಆ ವಿಚಾರಗಳಿಗೆ ಚಿರಂತನ ಜೀವ ನೀಡುವುದು ವಚನಕಾರರ ಗುರಿಯಾಯಿತು"[೧] ಎಂದು ಅಭಿಪ್ರಾಯಪಟ್ಟಿದ್ದಾರೆ.

ಜನರ ಆಶೋತ್ತರಗಳಿಗೆ ಬೆಲೆ ಇಲ್ಲದ ೧೨ನೇ ಶತಮಾನದ ಕಾಲದಲ್ಲಿ ರಾಜನ ತೀರ್ಮಾನವೇ ಅಂತಿಮ. ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಧಕ್ಕೆ ಉಂಟಾಗಿದ್ದ ಕಾಲವದು. ಬಸವರಾಜ ಸಬರದರವರು ತಮ್ಮ 'ವಚನಚಳುವಳಿ' ಎಂಬ ಕೃತಿಯಲ್ಲಿ ವಚನ ಕುರಿತಂತೆ ಹೀಗೆ ಅಭಿಪ್ರಾಯಪಟ್ಟಿದ್ದಾರೆ. "ಕನ್ನಡದ ನೆಲದಲ್ಲಿ ಜನಸಮುದಾಯಕ್ಕೆ ಮೊದಲಬಾರಿಗೆ ಸಹಜವಾದ ವ್ಯಕ್ತಿತ್ವದ ಪರಿಚಯ ಮಾಡಿಕೊಟ್ಟವರೆಂದರೆ ವಚನಕಾರರು. ರಾಜಸತ್ತೆಯ ಕಪಿಮುಷ್ಟಿಯಲ್ಲಿ ಜನಸಮುದಾಯದ ವ್ಯಕ್ತಿತ್ವವೆಲ್ಲ ಕುಸಿದುಹೋಗಿ, ರಾಜಮಹಾರಾಜರ ವ್ಯಕ್ತಿತ್ವವೇ ರಾಜ್ಯದ ತುಂಬಾ ವಿಜೃಂಭಿಸುವಾಗ, ವಚನಕಾರರು ಜನತೆಯೆಲ್ಲರ ಅರಿವು ಆಲೋಚನೆಗಳನ್ನು ಹುಟ್ಟುಹಾಕುವುದರ ಮೂಲಕ ಹೊಸ ವ್ಯಕ್ತಿತ್ವವನ್ನು ಕಟ್ಟಿಕೊಟ್ಟರು".[೨]

ಸಾಮಾಜಿಕ ಔನ್ನತ್ಯದ ಜೊತೆಗೆ ಆಧ್ಯಾತ್ಮಿಕ ಔನ್ನತ್ಯಕ್ಕೇರಿದ ಧರ್ಮವೇ ಬಸವಧರ್ಮ, ಅದುವೇ ವೀರಶೈವಧರ್ಮ. ತಮ್ಮ ತತ್ವ ನಿರೂಪಣೆಯಲ್ಲಿ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ, ಷಡ್ವಿದಶೀಲ, ಷಡ್ವಿದ ವ್ರತ ಮುಂತಾದ ಅನೇಕ ಸಿದ್ಧಾಂತಗಳ ಸಾರವನ್ನು ಅಳವಡಿಸಿಕೊಂಡಿರುತ್ತಾರೆ. ಏಕದೇವೋಪಾಸನೆಯೇ ಮೊದಲು ಶರಣನಾದವನು ಅನುಸರಿಸಬೇಕಾದ ಕರ್ತವ್ಯ. 'ಇಷ್ಟಲಿಂಗ', 'ಸ್ಥಾವರಲಿಂಗ'ಕ್ಕೆ ಪ್ರತಿಯಾಗಿ ಬಸವಣ್ಣ ಜಗತ್ತಿಗೆಕೊಟ್ಟ ಕೊಡುಗೆ ವಚನವನ್ನು ಕುರಿತಂತೆ ಎಂ.ಆರ್.ಶ್ರೀನಿವಾಸ್‌ಮೂರ್ತಿಯವರು "ವಚನಧರ್ಮ ವಿಸ್ತಾರವಾದ ಧರ್ಮ. ಸದಾಚಾರದ ಸದ್ವರ್ತನೆಯ ಭದ್ರವಾದ ನೆಲೆಗಟ್ಟು ಅದಕ್ಕಿದೆ. ಭಕ್ತಿ, ಜ್ಞಾನಿ, ವೈರಾಗ್ಯಗಳೆಂಬ ಗೋಪುರಗಳನ್ನು, ಚಿನ್ನದ ಕಲಶಗಳನ್ನು ಇಟ್ಟು ಷಟ್ಸ್ಥವೆಂಬ ಮಹಾಮನೆಯನ್ನು ವಚನಕಾರರು ಕಟ್ಟಿದ್ದಾರೆ"[೩] ಎಂದಿದ್ದಾರೆ.

ಅಲ್ಲಮಪ್ರಭುರವರ ವಚನವೊಂದು ಇಂತಿದೆ;

"ಕಲ್ಲುದೇವರೆಂದು ಪೂಜಿಸುವವರು; ಆಗದುಕಾಣಿರೋ!
ಆಗಡಿಗರಾದಿರಲ್ಲಾ
ಮುಂದೆ ಹುಟ್ಟುವ ಕೂಸಿಂಗೆ
ಇಂದು ಮೊಲೆಯ ಕೊಡುವಂತೆ ಗುಹೇಶ್ವರ"[೪]

---

೧. ಡಾ. ಸರ್ವಮಂಗಳಾ ಶಂಕರ್, ಸ್ವರವಚನಗಳು : ಒಂದು ಸಂಗೀತಾತ್ಮಕ ಅಧ್ಯಯನ
೨. ಬಸವರಾಜ ಸಬರದ – ವಚನ ಚಳುವಳಿ
೩. ಎಂ.ಆರ್.ಶ್ರೀನಿವಾಸಮೂರ್ತಿ, ವಚನಧರ್ಮಸಾರ, ೧೯೭೭, ಪು. ೧೪೯
೪. ಅ.ಪ್ರ.ವ.ಸಂ., ಸಂ: ಡಾ. ಬಿ.ವ್ಹಿ.ಮಲ್ಲಾಪುರ, ಪು. ೬೬, ವ. ೨೧೦

ಮುಂದೆ ಕೂಸು ಹುಟ್ಟುತ್ತದೆಂದು ಇಂದೇ ಮೊಲೆಯ ಹಾಲು ಕೊಡುವುದು ಎಷ್ಟು ನಿರರ್ಥಕವೋ ಹಾಗೆ ಕಲ್ಲುದೇವರ ಪೂಜಿಸುವ ಡಾಂಭಿಕರನ್ನು ವಿರೋಧಿಸಿದ್ದಾರೆ. ಸಂಸಾರದಲ್ಲಿದ್ದುಕೊಂಡೇ ಅದನ್ನು ಅಲ್ಲಗಳೆಯದೆ 'ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ' ಎಂಬಂತೆ ಅದರಿಂದ ಬಿಡಿಸಿ ಮುಕ್ತಿಯ ಹಾದಿಯತ್ತ ನಡೆದವರು ವಚನಕಾರರು.

ಅಕ್ಕಮಹಾದೇವಿಯವರ ವಚನ

"ಸಂಸಾರಸಂಗದಲ್ಲಿರ್ದೆ ನೋಡಾ ನಾನು
ಸಂಸಾರ ನಿಸ್ಸಾರವೆಂದು ತೋರಿದನೆನಗೆ ಶ್ರೀಗುರು
ಅಂಗವಿಕಾರದ ಸಂಗವ ನಿಲಿಸಿ
ಲಿಂಗವನಂಗದ ಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು
ಹಿಂದಣಜನ್ಮವ ತೊಡೆದು, ಮುಂದಣ ಪಥವ ತೋರಿದನೆನ್ನತಂದೆ
ಚೆನ್ನಮಲ್ಲಿಕಾರ್ಜುನನ ನಿಜವ ತೋರಿದನೆನ್ನಗುರು"[೧]

ಸತ್ಯಶುದ್ಧಕಾಯಕ ವಚನಕಾರರ ಬಹುಮುಖ್ಯ ತತ್ವಾಚರಣೆ. ಪ್ರತಿಯೊಬ್ಬರೂ ಕಾಯಕ ಮಾಡಿಯೇ ಜೀವಿಸಬೇಕು. ಯಾವ ಕಾಯಕವಾದರೂ ಶಿವಾರ್ಪಿತವಾದುದು. ಕಾಯಕವನ್ನು ಸಮರ್ಪಣಾ ಮನೋಭಾವದಿಂದ ಮಾಡಿದಾಗ ಅದು ಸತ್ಯ ಶುದ್ಧವಾಗುತ್ತದೆ. ಕಾಯಕದಿಂದ ಬಂದ ಹಣದಲ್ಲಿ ಜಂಗಮ ಸೇವೆ ಮಾಡಬೇಕು. ಆಯ್ದಕ್ಕಿ ಮಾರಯ್ಯನ ವಚನವೊಂದರಲ್ಲಿ ಕಾಯಕದ ಮಹತ್ವವನ್ನು ಹೀಗೆ ತಿಳಿಸಿದ್ದಾಳೆ.

"ಕಾಯಕದಲ್ಲಿ ನಿರತನಾದಡೆ
ಗುರುದರ್ಶನವಾದರೂ ಮರೆಯಬೇಕು
ಲಿಂಗಪೂಜೆಯಾದರೂ ಮರೆಯಬೇಕು
ಜಂಗಮಮುಂದೆ ನಿಂದಿದ್ದಡೂ
ಹಂಗ ಹರಿಯಬೇಕು
ಕಾಯಕವೆ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದಡೂ
ಕಾಯಕದೊಳಗು"[೨]

ಭೇದಭಾವ ಮರೆತು ಎಲ್ಲರೂ ಒಟ್ಟಿಗೆ ಕುಳಿತು ಸಹಭೋಜನ ಮಾಡುವ 'ದಾಸೋಹ' ಪರಿಕಲ್ಪನೆಯ ಜನಕ ಬಸವಣ್ಣ. ಪ್ರತಿಯೊಬ್ಬ ಶರಣರೂ ತಾವು ದುಡಿದ ಸತ್ಯಶುದ್ಧ

---

೧. ಶಿಶವಸಂ. ಸಂ. ಡಾ॥ ವೀರಣ್ಣರಾಜೂರ, ಪು. ೧೧೭, ವ. ೩೮೪
೨. ಸಂ.ವ.ಸಂ. ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೩೭೯, ವ. ೧೧೭೦

ಕಾಯಕದಲ್ಲಿ ಒಂದಂಶವನ್ನು ದಾಸೋಹಕ್ಕೂ ಮೀಸಲಿರಿಸಿ ಅದರಿಂದ ಸಾವಿರಾರು ಮಂದಿಯ ಪ್ರಸಾದಕ್ಕೆ ಕಾರಣೀಭೂತರಾದರು. ದಾಸೋಹಕ್ಕಾಗಿಯೇ ಮಹಾಮನೆಯೊಂದು ಕಲ್ಯಾಣದಲ್ಲಿ ನಿರ್ಮಾಣವಾಯಿತು.

ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಸರ್ವರೀತಿಯಿಂದಲೂ ಪ್ರಯತ್ನಿಸಿದ ವಚನಕಾರರು ಬಡವ-ಶ್ರೀಮಂತ, ಉಚ್ಚ-ನೀಚ, ಗಂಡು-ಹೆಣ್ಣು, ಮೇಲು-ಕೀಳು ಎಂಬ ತರತಮ ಭಾವ ಅಳಿಸಿ ಸರ್ವಸಮಾನತೆಗೆ ಸರ್ವವಿಧದಿಂದಲೂ ಶ್ರಮಿಸಿ, ಜೊತೆಜೊತೆಗೆ ಆಧ್ಯಾತ್ಮಿಕ ಉನ್ನತ್ತಿಯ ಕಡೆಗೂ ಕೊಂಡೊಯ್ದ ಈ ವಚನಗಳನ್ನೇ 'ಕನ್ನಡದ ಉಪನಿಷತ್ತು'ಗಳೆಂದು ಕರೆಯುತ್ತಾರೆ.

ಡಾ. ಶೈಲಜ ಉಡಚಣರವರ ಪ್ರಕಾರ, "ವಚನಗಳ ರಚನೆಯ ಉದ್ದೇಶ ಮನರಂಜನೆಯಲ್ಲ, ಆಳರಸರನ್ನು ಮೆಚ್ಚಿಸುವುದಂತೂ ಅಲ್ಲ. ಕೇವಲ ವೈಯಕ್ತಿಕ ಪ್ರೇಮವಿರಹಗಳ ನೋವುನಲಿವಿನ ಅಭಿವ್ಯಕ್ತಿಯಲ್ಲ. ವಚನಗಳು ಪರಿಸರವನ್ನು ಬದಲಿಸುವ ಸಂಕಲ್ಪದಿಂದಲೇ ಆವಿರ್ಭಾವಗೊಂಡವುಗಳು"[೧] ಎಂದಿದ್ದಾರೆ.

ರಂ.ಶ್ರೀ.ಮುಗಳಿಯವರು "ಉಪನಿಷತ್ತಿನಲ್ಲಿ ಇಲ್ಲದ ತತ್ವಪ್ರಣಾಲಿ, ಸಮಾಜ ನೀತಿ, ಆಚಾರ, ಧರ್ಮಗಳೂ ಅವುಗಳನ್ನು ಕನ್ನಡಿಸುವುದಕ್ಕೆ ಹೊರಟ ಭಾಷೆಯ ಜನಸಮ್ಮುಖ ಸ್ವರೂಪಗಳು ವಚನಗಳಲ್ಲಿವೆ"[೨] ಎಂದಿದ್ದಾರೆ.

ಇಂಥ ಅಮೂಲ್ಯ ಅರ್ಥಭರಿತ ಸಂಪತ್ತಾದ ವಚನಗಳಲ್ಲಿ ಮಹಿಳಾ ವಚನಕಾರ್ತಿಯಾದ 'ಅಮುಗೆಯ ರಾಯಮ್ಮನ' ವಚನಗಳ ಅಧ್ಯಯನವನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಿದ್ದೇನೆ.

---

೧. ಡಾ॥ ಶೈಲಜಾ ಉಡಚಣ, ವಚನ ಸಾಹಿತ್ಯ ಮತ್ತು ಮಹಿಳೆ, ೧೯೯೭, ಪು. ೨.

೨. ರಂ.ಶ್ರೀ.ಮುಗಳಿ – ಕನ್ನಡ ಸಾಹಿತ್ಯ ಚರಿತ್ರೆ

# ಅಧ್ಯಾಯ – ೨
# ವಚನ ಚಳುವಳಿ ಹಿನ್ನೆಲೆ

ಕನ್ನಡ ಸಾಹಿತ್ಯಕ್ಕೆ ವಿಶ್ವಮಾನ್ಯತೆ ತಂದುಕೊಟ್ಟ ಈ ವಚನ ಸಾಹಿತ್ಯದ ಮೂಲ ಹುಡುಕುತ್ತಾ ಹೋದಂತೆ ಅಭೇದ್ಯ. ಬಸವಣ್ಣನವರಿಗಿಂತಲೂ ಹಿಂದೆ ಜೇಡರ ದಾಸಿಮಯ್ಯನವರೇ ಮೂಲ ವಚನಕಾರರೆಂದು ವಿದ್ವಾಂಸರ ಅಭಿಮತ. 'ಶರಣರ ಸೂಳ್ನುಡಿಯನ್ನು ಒಂದರಗಳಿಗೆ ಕೇಳಿದರೆ ನಿನ್ನನ್ನಿತ್ತೆ ರಾಮನಾಥ', 'ಒಡಲೆಂಬ ಬಂಡಿಗೆ ಮೃಡ ಶರಣರನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ' ಎಂಬ ದಾಸಿಮಯ್ಯನ ಮಾತುಗಳು ಅವರಿಗಿಂತಲೂ ಹಿಂದೆ ವಚನ ಸಾಹಿತ್ಯ ಪ್ರಾರಂಭಗೊಂಡಿದ್ದಿರಬಹುದೆಂಬ ಊಹೆ ಮೂಡುತ್ತದೆ. ಆದರೂ ಬಸವಣ್ಣನವರ ಯುಗದಲ್ಲಿ ಉತ್ತುಂಗ ಶಿಖರಮುಟ್ಟಿ ಅಸಂಖ್ಯಾತ ವಚನಗಳು, ಹಲವು ಶರಣದಿಂದ ಹುಲುಸಾಗಿ ರಚನೆಗೊಂಡವು. ವಚನಗಳೆಲ್ಲವೂ ಮತ್ತೊಬ್ಬರನ್ನು ಕುರಿತು ಹೇಳಿದ ಮಾತುಗಳಲ್ಲ. ಬಹುತೇಕ ವಚನಗಳು ಆತ್ಮವಿಮರ್ಶೆಗಾಗಿಯೇ ನಿರ್ಮಿತಿಗೊಂಡವುಗಳು ಎಂಬುದು ಗಮನಾರ್ಹ ಅಂಶ.

ಅಂದಿನ ಶರಣರು ವಚನಗಳ ರಚನೆಗಳ ಮೂಲಕ ಸಮಾಜದಲ್ಲಿ ಜಾಗೃತಿ ಮೂಡಿಸುವ ಕಾಲವೂ ಸನ್ನಿಹಿತವಾಗಿತ್ತು. ಆಗಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಸನ್ನಿವೇಶಗಳು ವಚನಗಳ ಉಗಮಕ್ಕೆ ಹೇಗೆ ಪ್ರೇರಣೆಯಾದವೆಂಬುದನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ವಚನಸಾಹಿತ್ಯದ ರಚನೆ ಕುರಿತಂತೆ ಡಾ. ಎನ್.ಎನ್.ಚಿಕ್ಕಮಾದುರವರು ಹೀಗೆಂದಿದ್ದಾರೆ. "ಜನಸಾಮಾನ್ಯರ ಮನಸ್ಸನ್ನು ಮುಟ್ಟಿ ಅವರನ್ನು ಎಚ್ಚರಗೊಳಿಸುವುದೇ ಅವರ ಮುಖ್ಯ ಉದ್ದೇಶವಾಗಿದ್ದುದರಿಂದ ಅದಕ್ಕನುಗುಣವಾದ ಸಾಹಿತ್ಯ ಮಾಧ್ಯಮವನ್ನು ಅವರು ಕಂಡುಕೊಳ್ಳುವುದು ಅನಿವಾರ್ಯವಾಯಿತು. ಈ ಅನಿವಾರ್ಯತೆಯೇ ವಚನ ಸಾಹಿತ್ಯದ ಉಗಮಕ್ಕೆ ಮೂಲಪ್ರೇರಣೆಯಾಯಿತು. ಬಸವಣ್ಣನವರ ನೇತೃತ್ವದಲ್ಲಿ ಇದು ಹುಲುಸಾಗಿ ಬೆಳೆಯಿತು. ಅವರ ವ್ಯಕ್ತಿತ್ವವು ಚುಂಬಕ ಗಾಳಿಯಾಗಿ ನಾಡಿನ ನಾನಾ ಭಾಗಗಳಿಂದ ಸಾಧಕರನ್ನು ಸೆಳೆಯಿತು. ಅವರೆಲ್ಲರ ಸಾಧನೆಯಿಂದ ವಚನ ಸಾಹಿತ್ಯ ವೈವಿಧ್ಯಪೂರ್ಣವೂ, ವಿಶಿಷ್ಟಶಕ್ತಿ ಸಮನ್ವಿತವೂ ಆಗಿ ಪರಿಣಮಿಸಿತು."[೧]

---

೧. ವಚನ ಸಾಹಿತ್ಯ ಮತ್ತು ದಾಸಸಾಹಿತ್ಯಗಳ ಸಮೀಕ್ಷೆ – ಡಾ. ಎನ್.ಎನ್.ಚಿಕ್ಕಮಾದು, ಪ್ರಸಾರಾಂಗ, ಕರಾಮುವಿವಿ, ೨೦೧೧

## ಧಾರ್ಮಿಕ ಸನ್ನಿವೇಶದ ಹಿನ್ನೆಲೆ

೧೨ನೇ ಶತಮಾನದಲ್ಲಿ ಪುರೋಹಿತಶಾಹಿಗಳು ಸೃಷ್ಟಿಸಿದ್ದ ಅಸಂಖ್ಯಾತ ದೇವಾಲಯಗಳು, ಶ್ಲೋಕಗಳು, ಪೂಜೆ, ಜಪತಪಗಳು ಕೇವಲ ಮೇಲ್ಜಾತಿಗೆ ಮಾತ್ರ ಸೀಮಿತವಾಗಿದ್ದವು. ದೇವಾಲಯಗಳು ಕೆಳವರ್ಗದವರ ಶೋಷಣೆಯ ಕೇಂದ್ರಗಳಾಗಿದ್ದವು. ಇದನ್ನರಿತ ವಚನಕಾರರು ಮೊದಲಿಗೆ ವಿರೋಧಿಸಿದ್ದು ದೇವಾಲಯಗಳ ನಿರಾಕರಣೆ ಮತ್ತು ಬಹುದೇವತಾ ಆರಾಧನೆ. ಇದನ್ನು ಮನಗೊಂಡು 'ಇಷ್ಟಲಿಂಗ'ದ ಪರಿಕಲ್ಪನೆ ಜಾರಿಗೆ ತಂದರು. ಏಕದೇವೋಪಾಸನೆಯನ್ನು ಕೈಗೊಂಡರು. 'ಗುರು-ಲಿಂಗ-ಜಂಗಮ' ಎಂಬ ತತ್ವವನ್ನು ಹುಟ್ಟುಹಾಕಿದರು.

ಉರಿಲಿಂಗ ಪೆದ್ದಿಗಳ ವಚನವೊಂದು ಇಂತಿದೆ;

"ದೇಹವೆಂಬ ಮನೆಯಲ್ಲಿ ಮಹಾಲಿಂಗವೆಂಬರಸು
ಮನವೆಂಬ ಪೀಠದ ಮೇಲೆ ಮೂರ್ತಿಗೊಂಡಿರಲು
ಅಂತಃಕರಣವೆಂಬ ಪರಿಚಾರಕರುಗಳ ಕೈಯಿಂದ
ಪಂಚೇಂದ್ರಿಯಗಳೆಂಬ ಪರಿಯಾಣದಲ್ಲಿ
ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ
ಪದಾರ್ಥಂಗಳನೆಡೆ ಮಾಡಿಸಿಕೊಂಡು ಸವಿಯುತ್ತಿರಲು
ಆನಂದವೇ ಮಹಾಪ್ರಸಾದವಾಗಿ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ಸದಾಸನ್ನಿಹಿತಕಾಣಿರೆ"[೧]

ದೇಹವೆಂಬ ಮನೆಯಲ್ಲಿ 'ಮಹಾಲಿಂಗ' ಎಂಬ ಅರಸ ಮನವೆಂಬ ಪೀಠದ ಮೇಲೆ ಮೂರ್ತಿಗೊಂಡು ಅಂತಃಕರಣವೆಂಬ ಪರಿಚಾರಕರ ಕೈಯಿಂದ, ಪಂಚೇಂದ್ರಿಯಗಳ ಪರಿಕರಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಪದಾರ್ಥಗಳನ್ನೇ ಸವಿಯುತ್ತಿರಲು 'ಆನಂದ'ವೆಂಬ ಮಹಾಪ್ರಸಾದ ಸ್ವೀಕರಿಸುತ್ತಾನೆ. ಅವನು ಭಗವಂತನಿಗೆ ಹತ್ತಿರವಾಗುತ್ತಾನೆಂದು ಉರಿಲಿಂಗ ಪೆದ್ದಿಗಳು ದೇಹವೇ ಆಲಯ ಎಂಬ ಕಲ್ಪನೆಯನ್ನು ಬಳಸಿದ್ದಾರೆ.

"ಕಲ್ಲ ಮನೆಯ ಮಾಡಿ, ಕಲ್ಲದೇವರ ಪೂಜಿಸಿ,
ಆ ಕಲ್ಲು ಕಲ್ಲ ಮೇಲೆ ಕೆಡವಿದರೆ
ದೇವನೆತ್ತ ಹೋದರೊ?
ಲಿಂಗ ಪ್ರತಿಷ್ಠೆಯ ಮಾಡಿದವರಿಗೆ
ನಾಯಕ ನರಕ ಗುಹೇಶ್ವರಾ"[೨]

---

೧. ಸಂ.ವ.ಸಂ. ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೪೮೩, ವ ೧೪೧೦
೨. ಅ.ಪ್ರ.ವ.ಸಂ., ಸಂಪಾದಕ: ಡಾ. ಬಿ.ವ್ಹಿ.ಮಲ್ಲಾಪುರ, ಪುಟ. ೬೭, ವಚನ ೩೯

ಅಲ್ಲಮಪ್ರಭುಗಳು ಸ್ಥಾವರ ಲಿಂಗಗಳ ಮತ್ತು ದೇವಾಲಯಗಳ ನಿರಾಕರಣೆಯನ್ನು ಸ್ಪಷ್ಟವಾಗಿ ಇಲ್ಲಿ ಸೂಚಿಸಿದ್ದಾರೆ. ಕಲ್ಲಿನಿಂದ ದೇವರ ಸೃಷ್ಟಿ, ಕಲ್ಲಿನಿಂದಲೇ ಆಲಯವೂ ನಿರ್ಮಾಣ. ಆ ಕಲ್ಲೆ ದೇವರ ಮೇಲೆ ಬಿದ್ದರೆ ದೇವನ್ನೆತ್ತ ಹೋದನಯ್ಯಾ? ಎಂದು ವಿಡಂಬಿಸಿದ್ದಾರೆ.

"ಆರು ದೇವರ ನಿಮ್ಮ ಎದೆಯೆಲ್ಲ ಇರಿದುಕೊಳ್ಳಿ
ಮೂರು ದೇವರ ನಿಮ್ಮ ಮೂಗಿನಲ್ಲಿ ಮುರಿದುಕೊಳ್ಳಿ
ಗುರು ತೋರಿದ್ದು ಒಂದೇ ದೇವರು ಸಾಕು
ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ"[೧]

ಮೋಳಿಗೆ ಮಹಾದೇವಿಯವರು ಆರು, ಮೂರು ದೇವರು ಬೇಕಿಲ್ಲ. ಗುರು ತೋರಿದ ಒಂದೇ ದೇವರು ಸಾಕೆಂದು ಸಾದರಪಡಿಸಿದ್ದಾರೆ. ಏಕಲಿಂಗನಿಷ್ಠೆಯೇ ಸಾಕು ಎಂಬ ನಿಲುವಿದೆ.

ಅಂದಿನ ಭಕ್ತರ ಪರಿ ಕಂಡು ಬಸವಣ್ಣರವರು ರಚಿಸಿದ ವಚನ.

"ನೀರ ಕಂಡಲ್ಲಿ ಮುಳುಗುವರಯ್ಯಾ
ಮರವ ಕಂಡಲ್ಲಿ ಸುತ್ತುವರಯ್ಯಾ
ಬತ್ತುವಜಲವ, ಒಣಗುವ ಮರವ
ಮೆಚ್ಚಿದವರು ನಿನ್ನನ್ನೆತ್ತಬಲ್ಲರಯ್ಯಾ
ಕೂಡಲಸಂಗಮದೇವಾ"[೨]

ಕಂಡ ಕಂಡ ದೇವಾಲಯಗಳ ತೀರ್ಥಸ್ನಾನದಲ್ಲಿ ಜನ ನಿರತರಾಗಿರುತ್ತಾರೆ. ಅಶ್ವಥವೃಕ್ಷ, ಬೇವಿನವೃಕ್ಷ, ತುಳಸೀಗಿಡ ಎಂಬುವ ನಾನಾ ಮರಗಳ ಸುತ್ತಿ ಬೇಡುತ್ತಾರೆ. ಆದರೆ ಬತ್ತುಹೋಗುವ ನೀರನ್ನೂ ಒಣಗುವ ಮರವನ್ನು ನಂಬಿರುವವರು ಭಗವಂತನ ನಿಲುವನ್ನು ಅರಿಯಲಾರರೆಂದು ವಿಡಂಬಿಸಿರುತ್ತಾರೆ.

ಬಾಲ್ಯದಲ್ಲೇ ಬಸವಣ್ಣನವರು ಒಮ್ಮೆ ಮನೆಯ ಹಿತ್ತಲಿನಲ್ಲಿ ಚಿಕ್ಕ ಚಿಕ್ಕ ಗುಂಡಿಗಳನ್ನು ತೋಡಿದ್ದರು. ಅವರ ತಂದೆ ಮಾದರಸರು ಬಂದು ಇಂತೇಕೆ ಮಾಡಿರುವೆ? ಎಂದಾಗ ಬಸವಣ್ಣ "ಅಪ್ಪ, ಬಾವಿ ತೋಡಿರುತ್ತೇನೆ. ಆದರೆ ನೀರೇ ಬರುತ್ತಿಲ್ಲ" ಎಂದಾಗ, "ಹಲವಾರು ಗುಂಡಿ ತೋಡುವ ಬದಲು ಒಂದೇ ಕಡೆ ಆಳವಾಗಿ ತಓಡಿದರಲ್ಲವೇ ನೀರು ಬರುವುದು" ಎಂದರಂತೆ. ಆಗ ಬಸವಣ್ಣ "ಹೌದು, ಹಾಗೆಯೇ ನೂರಾರು ದೇವರನ್ನು ಪೂಜಿಸುವುದಕ್ಕಿಂತ ನಿಷ್ಠೆಯಿಂದ ಏಕಲಿಂಗ ಪೂಜೆ ಸಾಕಲ್ಲವೇ?" ಎಂದರು.

---

೧. ಶಿಶವಸಂ. ಸಂ.: ಡಾ. ವೀರಣ್ಣ ರಾಜೂರ, ಪುಟ. ೩೩೮, ವಚನ ೧೧೪೦.
೨. ಬ.ವ.ಸಂ. ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೧೪೪, ವ ೫೮೦

ಅರಿವಿಲ್ಲದ ಸಂಪ್ರದಾಯದ ಮುಕ್ಕೋಟಿ ದೇವರುಗಳಿಗಿಂತ ಏಕದೇವೋಪಾಸನೆಯೇ ಸಾಧನೆಗೆ ದಾರಿ ಎಂಬುದು ವಚನಕಾರರ ಆಂತರ್ಯ. ಇಂತಹುದೇ ಮತ್ತೊಂದು ವಚನ

"ಕಂಗಳ ಮುಂದೆ ಮಾಣಿಕ್ಯವಿದ್ದು ಕಾಣಲೇಕರಿಯರಯ್ಯಾ?
ಬಾಗಿಲ ಮುಂದೆ ಹಾಲಸಾಗರವಿದ್ದು ಒರತೆಯ
ನೀರಿಗೆ ಹಾರುವಂತೆ
ಕಂಗಳ ಮುಂದೆ ಮಹಾಶರಣನಿದ್ದು ಕತ್ತಲೆ ಎನಲೇಕೆ?
ಇನ್ನು ಬೇರೆ ಲಿಂಗವನರಸಹನನಲೇಕೆ?
ಆ ಮಹಾಶರಣ ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ"[೧]

ಕಷ್ಟಬಂದಾಗ ನಾನಾದೇವರ ಮೊರೆಹೋಗುವುದಕ್ಕಿಂತ ಕಣ್ಣಿನ ಬಳಿಯೇ ಇರುವ ಮಾಣಿಕ್ಯದ ಬೆಲೆ ಅರಿಯುತ್ತಿಲ್ಲವಲ್ಲ ನಾವು, ಬಾಗಿಲ ಬಳಿಯೇ ಹಾಲಿನ ಸಾಗರವಿದ್ದರೂ, ನದಿಯ ನೀರಿಗೆ ಆಸೆಪಡುವಂತೆ, ಮಹಾಶರಣನ ಇರುವಿಕೆಯೇ ಬೆಳಕು. ಆ ಶಿವಶರಣನೇ ಜ್ಯೋತಿಸ್ವರೂಪಿ ಭಗವಂತ ಅವನಿಗಿಂತಲೂ ಅನ್ಯದೇವರ ಅವಶ್ಯಕತೆ ಬೇಕಿಲ್ಲ ಎಂದು ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ ಎಚ್ಚರಿಸಿದ್ದಾರೆ. ಶರಣರ ಮಹಿಮೆಯ ಹೊಗಳುತ್ತಾ,

"ಕಲ್ಲದೇವರ ಪೂಜೆಯ ಮಾಡಿ
ಕಲಿಯುಗದ ಕತ್ತೆಗಳಾಗಿ ಹುಟ್ಟಿದರು
ಮಣ್ಣದೇವರ ಪೂಜಿಸಿ ಮಾನಹೀನರಾದರು
ಮರನ ದೇವರೆಂದು ಪೂಜಿಸಿ ಮಣ್ಣ ಕೂಡಿದರು
ದೇವರ ಪೂಜಿಸಿ ಸ್ವರ್ಗಕ್ಕೇರದೆ ಹೋದರು
ಜಗದ್ಭರಿತವಾದ ಪರಶಿವನೊಳಗೆ
ಕಿಂಕರನಾದ ಶಿವಭಕ್ತನೆ ಶ್ರೇಷ್ಠನೆಂದಾತ
ನಮ್ಮ ಅಂಬಿಗರ ಚೌಡಯ್ಯ"[೨]

ವೈದಿಕ ಸಂಪ್ರದಾಯದಲ್ಲಿ ಕಲ್ಲು, ಮಣ್ಣು, ಮರ, ಗಿಡ, ಭೂಮಿ, ಆಕಾಶ, ಸೂರ್ಯ, ಚಂದ್ರ ಯಾರನ್ನೂ ಬಿಡಲಿಲ್ಲ. ದೇವರ ಹೆಸರಿನಲ್ಲಿ ಮುಗ್ಧಜನರ ಸುಲಿಗೆಗೆ ಶೋಷಣೆಗೆ ದಾರಿ ಮಾಡಿಕೊಂಡಿದ್ದರು. ಕಲ್ಲಪೂಜಿಸಿ ಕಲಿಯುಗದ ಕತ್ತೆಗಳಾಗಿ ಹುಟ್ಟುತ್ತಾರೆ. ಮಣ್ಣಪೂಜಿಸಿ ಮಾನಹೀನರಾಗುತ್ತಾರೆ. ಮರವ ಪೂಜಿಸಿ ಮಣ್ಣ ಸೇರುತ್ತಾರೆ. ಇಂತೀ ದೇವರುಗಳನ್ನು ಪೂಜಿಸಿ ಸ್ವರ್ಗಕ್ಕೇ ತರದೇ ಹೋದರು. ಇವರೆಲ್ಲರಿಗಿಂತ ಶಿವಭಕ್ತನೇ ಶ್ರೇಷ್ಠ ಎಂದು

---

೧. ಶಿ.ಶ.ವ.ಸಂ., ಸಂ.: ಡಾ॥ ವೀರಣ್ಣರಾಜೂರ, ಪು. ೩೮೭, ವ. ೧೨೭೨
೨. ಸಂ. ವ.ಸಂ. ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೩೪, ವ. ೯೯

ಅಂಬಿಗರ ಚೌಡಯ್ಯ ಹೇಳಿದ್ದಾರೆ. ದೇವರ ಪೂಜೆಗಾಗಿ ಅನುಕರಣೆಯ ಪದ್ಧತಿಯ ಪೂಜೆ ರೀತಿ ರಿವಾಜನ್ನು ವಿಡಂಬಿಸುತ್ತಾ ಅಲ್ಲಿಯೇ ಹೀಗೆ ಖಂಡಿಸುತ್ತಾರೆ.

"ಅಗ್ಘ್ರವಣಿ ಪತ್ರ ಪುಷ್ಪ ಧೂಪದೀಪ ನಿವಾಳಿಯಲ್ಲಿ
ಪೂಜಿಸಿಪೂಜಿಸಿಬಳಲುತ್ತೈದಾರೆ
ಏನಂದರಿಯರು ಎಂತೆಂದರಿಯರು
ಜನಮರುಳೋ ಜಾತ್ರೆಮರುಳೊ ಎಂಬಂತೆ
ಎಲ್ಲರೂ ಪೂಜಿಸಿ, ಏನನೂ ಕಾಣದೆ
ಲಯವಾಗಿ ಹೋದರು ಗುಹೇಶ್ವರಾ"[೧]

ಪತ್ರ, ಪುಷ್ಪ, ಧೂಪ, ದೀಪ, ವ್ರತಗಳಿಗಿಂತ ಮನಸ್ಸಿನ ದೃಢತೆ ಮುಖ್ಯ. ಇವೆಲ್ಲಾ ಇಲ್ಲದಿದ್ದರೂ ಲಿಂಗಾಂಗ ಸಾಮರಸ್ಯ ಸಾಧ್ಯ ಎಂದು ಸರಳ ಪೂಜಾ ವಿಧಾನ ತೋರಿಸಿಕೊಟ್ಟು, ಪುರೋಹಿತರ ಶೋಷಣೆಯ ಕೇಂದ್ರ ಸ್ಥಳ ದೇವಾಲಯ ನಿರಾಕರಿಸಿ, ಒಡ್ಡ ಸಿದ್ದರಾಮನನ್ನು ಶರಣಭಕ್ತ ಸಿದ್ಧರಾಮನನ್ನಾಗಿ ಮಾಡಿದ ಕೀರ್ತಿ ಅಲ್ಲಮಪ್ರಭುಗಳದು.

"ಕಲ್ಲನಾಗರ ಕಂಡಡೆ ಹಾಲನೆರೆಯೆಂಬರು
ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯ
ಎಂಬ ಜಂಗಮ ಮನೆಗೆ ಬಂದಡೆ ನಡೆ ಎಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ
ಕಲ್ಲತಾಗಿದ ಮಿಟ್ಟೆಯಂತಪ್ಪರಯ್ಯಾ"[೨]

ಕಲ್ಲನಾಗರಕ್ಕೆ ಹಬ್ಬಹರಿದಿನಗಳಲ್ಲಿ ಹಾಲಿನ ಅಭಿಷೇಕ ಮಾಡುತ್ತಾರೆ. ದಿಟದ ನಾಗರವೇನಾದರೂ ಕಂಡರೆ ಕೊಂದೇ ಹಾಕುವರು. ಉಣ್ಣುವ ಜಂಗಮನಿಗೆ ನಡೆ ಎಂದು ಉಣ್ಣದ ಲಿಂಗಕ್ಕೆ ಮೃಷ್ಟಾನ್ನವನ್ನೇ ನೀಡುವರು. ಶರಣರ ಕಂಡು ಉದಾಸೀನ ಮಾಡಿ ಅಹಂಕಾರದಿಂದ ವರ್ತಿಸಿದರೆ ಕಲ್ಲ ತಾಗಿದ ಮಣ್ಣಿನಂತಾಗುತ್ತಾರೆಂದು ವಿಡಂಬಿಸಿದ್ದಾರೆ.

"ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮಾರಿ ಮಸಣಿಯ ಭಕ್ತೆ
ಗಂಡಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆಮಾಂಸ

---

೧. ಅ.ಪ್ರ.ವ.ಸಂ., ಸಂ. ಡಾ॥ ಬಿ.ವ್ಹಿ.ಮಲ್ಲಾಪುರ, ಪು. ೩೮, ವ. ೧೧೮.
೨. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೪೯, ವ. ೧೯೪

ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲಸಂಗಮದೇವಾ"[೧]

ಗಂಡ ಶಿವನ ಭಕ್ತ, ಹೆಂಡತಿ ಮಾರಿ, ಮಸಣಿಯಂಥ ನೂರಾರು ದೇವರ ಭಕ್ತೆ. ಗಂಡ ಪಾದೋದಕ ಪ್ರಸಾದ ಸ್ವೀಕರಿಸಿದರೆ ಹೆಂಡತಿ ಮದ್ಯಮಾಂಸ ಪ್ರಿಯೆ. ಹೀಗೆ ತನು, ಮನ ಶುದ್ಧತೆಯಿಲ್ಲದ ಭಕ್ತಿಯ ಆಚರಣೆ ಹೆಂಡದ ಮಡಕೆಯ ಹೊರಗೆ ತೊಳೆದಂತೆ ನಿಷ್ಪ್ರಯೋಜಕ ಎಂದು ವಿಡಂಬಿಸಿದ್ದಾರೆ. ಹೀಗೆ ೧೨ನೇ ಶತಮಾನದಲ್ಲಿ ವೈದಿಕ ಸಂಪ್ರದಾಯದ ತುತ್ತತುದಿಯಲ್ಲೆ ದೇವಾಲಯದ ಆಚರಣೆಗಳ ಹೆಸರಿನಲ್ಲಿ ಕೆಳವರ್ಗದವರ ಶೋಷಣೆಯನ್ನು ಮನಗೊಂಡ ವಚನಕಾರರು ಮೊದಲಿಗೆ ನಿರಾಕರಿಸಿದ್ದು ದೇವಾಲಯ ನಿರ್ಮಾಣ ಮತ್ತು ಬಹುದೇವತಾ ಆರಾಧನೆ.

### ಸಾಮಾಜಿಕ ಹಿನ್ನೆಲೆ – ಜಾತಿವಿರೋಧ

ಮೇಲು–ಕೀಳು, ಬಡವ–ಶ್ರೀಮಂತ, ಉಚ್ಚ–ನೀಚ ಎಂಬ ತಾರತಮ್ಯ ಹಿಂದಿನಿಂದಲೂ ಬೆಳೆದುಬಂದಿರುವ ಸಾಮಾಜಿಕ ಪಿಡುಗು. ಅಂಥ ಸಂದರ್ಭದಲ್ಲಿ ಸಮಾನತೆ ತರಲು ವಚನಕಾರರು ಸಾಕಷ್ಟು ಪರಿಶ್ರಮಪಟ್ಟರು. 'ಜಾತಿ'ಯೆಂಬ ಪಿಡುಗು ತನ್ನೆಲ್ಲಾ ಟಿಸಿಲುಗಳೊಂದಿಗೆ ವಿಸ್ತೃತವಾಗಿ ಹಬ್ಬಿಹರಡಿ ನಿಂತಿದೆ. ಒಂದು ಕಡೆ ಕತ್ತರಿಸಿದರೆ ಮತ್ತೊಂದೆಡೆ ಚಿಗುರುತ್ತದೆ. ಬುಡಮೇಲು ಕಡಿದು ಹಾಕಲು ಬಂದ ಮಹಾನೀಯರೆಲ್ಲಾ ಇತಿಹಾಸ ಪುಟ ಸೇರಿದರು.

"ಯಾವುದೇ ಸಮಾಜ ಸರ್ವಾಂಗೀಣ ಅಭಿವೃದ್ಧಿಯಾಗಿ ವಿಕಾಸಗೊಳ್ಳಬೇಕಾದರೆ ಆ ಸಮಾಜದಲ್ಲಿ ಸಮಾನತೆ, ಸಹಬಾಳ್ವೆ, ಸಹಕಾರ ಇರಬೇಕು. ಯಾವ ಸಮಾಜದಲ್ಲಿ ಮಾನವೀಯತೆ ಮರೆತು, ಮೇಲು ಕೀಳೆಂಬ ವಿಷದ ಬೀಜಬಿತ್ತಿ ಆ ಜಾತಿ, ಈ ಜಾತಿ ಎಂದು ಕಿತ್ತಾಡುತ್ತಾರೋ ಅಂಥ ಸಮಾಜ ಸುಸಂಸ್ಕೃತವಾಗಲು ಸಾಧ್ಯವಿಲ್ಲ".[೨]

"ಕೊಲುವನೇ ಮಾದಿಗ, ಹೊಲಸು
ಕುಲವೇನೊ ಆವದಿರ ಕುಲವೇನೊ?
ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗನ ಶರಣರೆ ಕುಲಜರು"[೩]

೧. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೨೯, ವ. ೧೦೪
೨. ಸಮಾಜ ವಿಕಾಸಕ್ಕೆ ಶರಣ ಸಂಸ್ಕೃತಿ, ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ, ಪು. ೮
೩. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೧೪೮, ವ. ೫೯೧

ಸಕಲ ಜೀವರಾಶಿಗೂ ಬೆಲೆಯಿದೆ. ಪ್ರಾಣಿಹತ್ಯೆ ಮಾಡುವುದು ಸರಿಯಿಲ್ಲ. ಕೊಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯನೇ ಹೊರತು ಹುಟ್ಟಿನಿಂದ ಬಂದುದಲ್ಲ. ಕೀಳು–ಮೇಲು ಎಂಬುದು ಇದು ಆಚರಣೆಯಿಂದ ಬಂದುದು. ಸದಾಚಾರಣೆಯಿಂದ ನಡೆದವನೇ ಕುಲಜ ಎಂಬ ಅಭಿಪ್ರಾಯವಿದೆ. ಅದೇ ರೀತಿ ಆಧ್ಯಾತ್ಮಿಕ ಹುಟ್ಟಿನಿಂದ ತಾನು ಮಾದಾರ ಚೆನ್ನಯ್ಯನ ಮಗನೆಂದು ಹೇಳುವ ವಚನವಿದು –

"ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ;
ತರ್ಕದ ಬೆನ್ನ ಬಾರನೆತ್ತುವೆ
ಆಗಮದ ಮೂಗ ಕೊಯಿದೆ ನೋಡಯ್ಯ
ಮಹಾದಾನಿ ಕೂಡಲಸಂಗಮದೇವಾ
ಮಾದಾರ ಚೆನ್ನಯ್ಯನ ಮನೆಯ ಮಗನಾನಯ್ಯ"[೧]

ವೇದಶಾಸ್ತ್ರ, ತರ್ಕ, ಆಗಮ ಇವೆಲ್ಲಾ ಪುರೋಹಿತರ ಸ್ವತ್ತು. ತಾವು ಇದನ್ನು ಸಾರಾಸಗಟವಾಗಿ ನಿರಾಕರಿಸುವ ಭಾವ ಇಲ್ಲಿದೆ.

"ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ
ಇವನಮ್ಮವ, ಇವನಮ್ಮವ, ಇವ ನಮ್ಮವನೆಂದೆನಿಸಯ್ಯಾ
ಕೂಡಲ ಸಂಗಮದೇವಾ, ನಿಮ್ಮ ಮನೆಯಮಗನೆಂದೆನಿಸಯ್ಯಾ"[೨]

ಜಾತಿಯಿಂದ ವ್ಯಕ್ತಿಯನ್ನು ಗುರುತಿಸುವುದಕ್ಕಿಂತಲೂ 'ಇವನಮ್ಮವ' ಎಂಬ ಅಭಿಮಾನದಿಂದ ಮಾತನಾಡಿಸಿದರೆ ಆ ಮಾತಿನ ತೃಪ್ತಿಯೇ ಗಗನದಷ್ಟು ವಿಶಾಲವಾದುದು. ಮಾದಾರ ಚೆನ್ನಯ್ಯನ ಮನೆಯಲ್ಲಿ ಬಸವಣ್ಣನವರು ಭಗವಂತನುಂಡ ಪ್ರಸಂಗವನ್ನು ಒಂದು ವಚನದಲ್ಲಿ ಈ ರೀತಿ ನೆನೆದಿದ್ದಾರೆ.

"ವೇದನಡುನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತಯ್ಯಾ!
ತರ್ಕ ತರ್ಕಿಸಲರಿಯದೆ ಮೂಗುವಟ್ಟದ್ದಿತಯ್ಯಾ!
ಆಗಮ ಹೇರತೊಲಗಿ ಅಗಲಿಟ್ಟಿತಯ್ಯಾ!
ನಮ್ಮ ಕೂಡಲಸಂಗಯ್ಯನು
ಮಾದಾರ ಚೆನ್ನಯ್ಯನ ಮನೆಯಲುಂಡ ಕಾರಣ!"[೩]

---

೧. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೧೮೦, ವ. ೭೧೭
೨. ಅದೇ ಪುಸ್ತಕ, ಪು. ೧೮, ವ. ೬೨
೩. ಅದೇ ಪುಸ್ತಕ, ಪು. ೧೮೭, ವ. ೭೫೦

ಚೆನ್ನಯ್ಯನ ಗುಪ್ತಭಕ್ತಿಗೆ ಮೆಚ್ಚಿ ಶಿವನೇ ಅಂಬಲಿಸೇವಿಸಿದ ಪರಿಣಾಮ ಚೋಳರಾಜ ನೀಡಿದ ಮೃಷ್ಟಾನ್ನ ತಿನ್ನದೆ ಜಗತ್ತಿಗೇ ಚೆನ್ನಯ್ಯನ ಭಕ್ತಿಯನ್ನು ತಿಳಿಯಪಡಿಸಿದ ಚಿತ್ರಣ ಹರಿಹರನ 'ಮಾದಾರ ಚೆನ್ನಯ್ಯನರಗಳೆ'ಯಲ್ಲಿ ಕಂಡುಬರುತ್ತದೆ. ಬಸವಣ್ಣನವರಿ-ಗಿಂತಲೂ ಹಿರಿಯ ಸಮಕಾಲೀನ ಈತ. ತಾನು ಮಾದಾರ ಚೆನ್ನಯ್ಯನ ಮನೆಯ ಮಗನೆಂದು ನಿರ್ಭಯದಿಂದ ಹೇಳುತ್ತಾರೆ.

"ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ" ಎನ್ನುವಲ್ಲಿ ಬಸವಣ್ಣನವರ ಸಮಾನತೆಯ ಸಮಾಜದ ಚಿತ್ರಣವನ್ನು ಮನಗಾಣಬಹುದು.

"ಎಂತಹವನಾದಡೇನು, ಲಿಂಗವಮುಟ್ಟದವನೆ ಕೀಳುಜಾತಿ
ಕುಲವಹುದು ತಪ್ಪದು ಲಿಂಗಮುಟ್ಟಲೊಡನೆ
ಹೊನ್ನಹುದು ತಪ್ಪದುಪರುಷ ಮುಟ್ಟಲೊಡನೆ
ಕೂಡಲಸಂಗಮದೇವನೊಲ್ಲಸರ್ವಸಂದೇಹಿಗಳ"[೧]

ಅವನು ಯಾವ ಕುಲವಾದರೇನು? ಲಿಂಗವ ಧರಿಸಿದವನೇ ಕುಲಜನು. ಲಿಂಗಮುಟ್ಟಿದೊಡನೆಯೇ ಕುಲ ಯಾವುದೆಂದು ಕೇಳಲುಬರುವುದಿಲ್ಲ. ಬೇಡಿದ್ದನ್ನು ಕೊಡುವ ಪರುಷಮಣಿ ಈ ಲಿಂಗ.

"ದೇವಸಹಿತ ಭಕ್ತಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡಡೆ
ನಿಮ್ಮಾಣೆ! ನಿಮ್ಮ ಪುರಾತರಾಣೆ! ತಲೆದಂಡ! ತಲೆದಂಡ
ಕೂಡಲ ಸಂಗಮದೇವಾ, ಭಕ್ತರಲ್ಲಿ ಕುಲವನರಸಿದಡೆ
ನಿಮ್ಮ ರಾಣಿವಾಸದಾಣೆ"[೨]

ಭಕ್ತನ ಕುಲ ಯಾವುದೆಂದು ಕೇಳುವುದು ಮಹಾಪರಾಧ. ಅಂಥವರ ತಲೆದಂಡ ಕಾದಿದೆ. ಭಕ್ತರ ಕುಲ ಯಾವುದೆಂದು ತಾನು ಕೇಳುವುದಿಲ್ಲವೆಂದು ಬಸವಣ್ಣ ಪಾರ್ವತಿಯ ಮೇಲೆ ಪ್ರಮಾಣಮಾಡುತ್ತಾರೆ. ಅವರು ಬಯಸಿದಂತೆ ಸರ್ವಸಮಾನತೆಯ ಸಮಾಜ ನಿರ್ಮಾಣ ಮಾಡಲು ಪ್ರಯತ್ನಿಸಿದರು.

"ದಾಸೀ ಪುತ್ರನಾಗಲಿ ವೇಶ್ಯಾಪುತ್ರನಾಗಲಿ
ಶಿವದೀಕ್ಷೆಯ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ

---

೧. ಬ.ವ.ಸಂ., ಸಂ. ಡಾ. ಎಂ.ಎಂ.ಕಲಬುರ್ಗಿ, ಪು. ೩೮, ವ. ೧೪೨

೨. ಅದೇ. ಪುಸ್ತಕ, ಪು. ೧೧೦, ವ. ೪೫೩

ಪೂಜಿಸಿ ಪಾದೋದಕ ಪ್ರಸಾದವಕೊಂಬುವುದೇಯೋಗ್ಯ
ಹೀಗಿಲ್ಲದೆ ಉದಾಸೀನ ಮಾಡಿಬಿಡುವವರಿಗೆ
ಪಂಚಮಹಾಪಾತಕ ನರಕ ಕಾಣಾ ಕೂಡಲಸಂಗಮದೇವಾ"[೧]

ಶಿವದೀಕ್ಷೆ, ಲಿಂಗಾಂಗ ಸಾಮರಸ್ಯವಾದ ಬಳಿಕ ಆತನೇ ಸಾಕ್ಷಾತ್ ಶಿವಸ್ವರೂಪಿ ಎನಿಸುತ್ತಾನೆ. ಆತ ದಾಸಿಯ ಮತ್ತು ವೇಶ್ಯಾ ಮಗನೇ ಆಗಿದ್ದರೂ ಸಾಕ್ಷಾತ್ ಶಿವನೆನಿಸುತ್ತಾನೆ. ಉದಾಸೀನ ಮಾಡಿದರೆ ಪಂಚಮಹಾಪಾತಕವೆಂದು ಎಚ್ಚರಿಸುತ್ತಾರೆ. ಜಾತಿಯನ್ನು ಕುರಿತಂತೆ ಲೇವಡಿ ಮಾಡುವವರನ್ನು ಕುರಿತು,

"ಹೊಲೆಯ ಹೊಲೆಯ ಎಂದಡೆ ಹೊಲೆಯರೆಂತಪ್ಪರಯ್ಯ?
ಹೊಲೆಯ ಹೊರಕೇರಿಯಲ್ಲಿರುವನು ಊರೊಳಗಿಲ್ಲವೆ ಅಯ್ಯಾ ಹೊಲೆಯರು?
ತಾಯಿಗೆ ಬೈದವನೇ ಹೊಲೆಯ ತಂದೆಗೆ ಕೊಟ್ಟವನೇ ಹೊಲೆಯ"

ಹೀಗೆ ಕೇಳುತ್ತ

"ಜಗಳ ಬಂದಾಗ ಹಹ ತನ್ನ ಕುಲ ಹೆಚ್ಚು
ನಿನ್ನ ಕುಲ ಕಡಿಮೆ ಎಂದು
ಬಡಿದಾಡುವ ಕುನ್ನಿ ನಾಯಿಗಳ
ವಾಮಪಾದುಕೆಯ ಕೊಂಡು ಅವರು ಅಂಗುಳಮೆಟ್ಟಿ
ಫಡಫಡನೆ ಹೊಡೆಯೆಂದಾದ
ನಮ್ಮ ದಿಟ್ಟ ಅಂಬಿಗರ ಚೌಡಯ್ಯ"[೨]

ಹೊಲೆಯ ಎಂದರೆ ಯಾರು? ಎಂದು ಚೌಡಯ್ಯ ಸ್ಪಷ್ಟವಾಗಿ ವಿವರಿಸಿದ್ದಾರೆ. ಹೊಲೆಯರು ಊರ ಹೊರಗಿರುವವರಲ್ಲ. ಊರೊಳಗೂ ಇದ್ದಾರೆ. ತಂದೆತಾಯಿಯ ನಿಂದಿಸುವವನೇ ಹೊಲೆಯ. ಕುಲ ಕುಲ ಎಂದು ಬಡಿದಾಡುವವನೇ ಹೊಲೆಯ. ಇವರುಗಳಿಗೆ ಪಾದುಕೆಯಿಂದ ಬಡಿಯುವುದಾಗಿ ನಿಷ್ಠುರವಾಗಿ ನೇರನುಡಿದಿದ್ದಾರೆ.

### ಮೂಢನಂಬಿಕೆ ವಿರೋಧ

ವಚನಕಾರರು ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಮೂಢನಂಬಿಕೆಗಳನ್ನು ಪ್ರಶ್ನಿಸಿದರು. ಇವರು ಒಪ್ಪದೆ ತಿಳಿಯದೆ ಯಾವ ಕೆಲಸವನ್ನು ಮಾಡುತ್ತಿರಲಿಲ್ಲ.

---

೧. ಬ.ವ.ಸಂ. ಡಾ. ಎಂ.ಎಂ.ಕಲಬುರ್ಗಿ
೨. ಸಂ.ವ.ಸಂ., ಸಂ: ಡಾ॥ ಎಂ.ಎಂ.ಕಲಬುರ್ಗಿ, ಪು. ೯೩, ವ ೨೮೯

ಪುರೋಹಿತಶಾಹಿಗಳು ಮೂಢನಂಬಿಕೆಯ ಹೆಸರಿನಲ್ಲಿ ಸಮಾಜದಲ್ಲಿ ಭಯದ ವಾತಾವರಣ ಸೃಷ್ಟಿಸಿ, ಕೆಳವರ್ಗದವರನ್ನು ಕಪಿಮುಷ್ಟಿಯನ್ನಾಗಿರಿಸಿಕೊಂಡಿದ್ದರು. ವಚನಕಾರರು ಮೊದಲಿಗೆ ಮೂಢನಂಬಿಕೆಗಳನ್ನು ಬಯಲಿಗೆಳೆದರು. ಶುಭದಿನ, ತಿಥಿ ವಾರವೆಂದು ನಂಬಿಸಿ ಹಗಲಿನ ದರೋಡೆಗೆ ಇಳಿದವರ ಕಂಡು

"ಎಮ್ಮವರು ಬೆಸಗೊಂಡರೆ ಶುಭ ಲಗ್ನವೆನ್ನಿರಯ್ಯಾ
ರಾಶಿ, ಕೂಟ ಋಣ ಸಂಬಂಧವುಂಟೆಂದು ಹೇಳಿರಯ್ಯಾ
ಚಂದ್ರಬಲ, ತಾರಾಬಲವುಂಟೆಂದು ಹೇಳಿರಯ್ಯ
ನಾಳಿನ ದಿನಕ್ಕಿಂತ ಇಂದಿನ ದಿನ ಲೇಸೆಂದು ಹೇಳಿರಯ್ಯ
ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯ!"[೧]

ತನ್ನ ತಾನರಿಯಲು ವಾರ, ದಿನ, ಲಗ್ನ, ರಾಶಿ, ಕೂಟಗಳ ಅಗತ್ಯವಿಲ್ಲ. ನಾಳಿನ ದಿನಕ್ಕಿಂತ ಇಂದಿನ ದಿನವೇ ಲೇಸನ್ನಿ ಎಂಬುದು ಇಂದಿನ ಸಮಾಜಕ್ಕೂ ಅನ್ವಯವಾಗುವಂಥದ್ದು ಎಂಬುದು ಬಸವಣ್ಣನವರ ನಿಲುವು. ಪ್ರತಿಯೊಂದು ಸಂದರ್ಭದಲ್ಲೂ ದಿನ, ಗಳಿಗೆ ನೋಡುವುದು ಹೆಚ್ಚಾಗಿದೆ. ಇಂದು ಜಾತಕ ಕರ್ಮ ಕಂಪ್ಯೂಟರ್‌ಗಳಲ್ಲೂ ಹಾಸುಹೊಕ್ಕಾಗಿ ಸೇರಿದೆ. ಓದಿರುವ ವಿದ್ಯಾವಂತ ಯುವಕರು, ಯುವತಿಯರೇ ಜಾತಕ ಕೇಳುವ ಭರಾಟೆಯಲ್ಲಿರುವುದು ಸೋಜಿಗವೆನಿಸುತ್ತದೆ. ಇಂಟರ್‌ನೆಟ್‌ನಲ್ಲೂ ಜಾತಕನೋಡುವ ಹಂತಕ್ಕೆ ಬಂದು ಇಂದು ತಲುಪಿದ್ದೇವೆ.

"ಹಾವಾಡಿಗನು ಮೂಕೊರತಿಯು;
ತನ್ನ ಕೈಯಲ್ಲಿ ಹಾವು
ಮಗನ ಮದುವೆಗೆ ಶಕುನವ ನೋಡಹೋಹಾಗ
ಇದಿರಲೊಬ್ಬ ಮೂಕೊರತಿಯ ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ
ತನ್ನ ಸತಿ ಮೂಕೊರತಿ, ತನ್ನ ಕೈಯಲ್ಲಿ ಹಾವು
ತಾನು ಮೂಕೊರೆಯ
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ ಕೂಡಲಸಂಗಮದೇವಾ?"[೨]

---

೧. ಬ.ವ.ಸಂ., ಸಂ.: ಡಾ|| ಎಂ.ಎಂ.ಕಲಬುರ್ಗಿ, ಪು. ೨೪, ವ. ೮೩
೨. ಅದೇ ಪುಸ್ತಕ, ಪು. ೨೯, ವ. ೧೦೫

ಬಸವಣ್ಣನವರು ಈ ವಚನದಲ್ಲಿ ಶಕುನ ಕೇಳುವವರನ್ನು ವಿಡಂಬಿಸಿದ್ದಾರೆ. ಹಾವಾಡಿಗ ಮೂಕೊರತಿಯು ತನ್ನ ಮಗನ ಮದುವೆಗೆ ಶಕುನ ಕೇಳಲು ಹೋದಾಗ ಎದುರಗಡೆ ಮತ್ತೊಬ್ಬ ಮೂಕೊರತಿಯ ಕಂಡು ಶಕುನ ಸರಿಯಿಲ್ಲವೆಂದಳಂತೆ. ತಾನೊಬ್ಬಳು ಮೂಕೊರತಿ, ತನ್ನ ಮನೆಯಲ್ಲಿ ಹಾವು ಇದೆ ಎಂಬುದರನ್ನು ಮರೆತು. ಹೀಗೆ ಇಂದಿನ ಯುಗದಲ್ಲೂ ಹುಟ್ಟು, ಮದುವೆ, ಶುಭಕಾರ್ಯ ಪ್ರತಿಯೊಂದು ಸಂದರ್ಭದಲ್ಲೂ ಜಾತಕಕೇಳಿಯೇ ಮನೆಯಿಂದ ಹೊರಡುವ ಕಾಲಬಂದಿದೆ. ಇಂದಿನ ವೈಜ್ಞಾನಿಕ ಯುಗದಲ್ಲೂ ಭವಿಷ್ಯ ತನ್ನ ಜಾಲವನ್ನು ಮತ್ತಷ್ಟು ವಿಸ್ತರಿಸಿಕೊಂಡು ಭದ್ರವಾಗಿ ನೆಲೆ ನಿಂತಿದೆ. ಓದಿರುವ ವಿದ್ಯಾವಂತರೂ ರಾಶಿ, ನಕ್ಷತ್ರ, ತಿಥಿ, ವಾರವೆಂದು ವ್ಯರ್ಥಜೀವನ ಕಳೆಯುತ್ತಿರುವುದು ನಗೆಪಾಟಲಾಗಿದೆ. ವಚನಕಾರರ ತತ್ವಗಳು ಆದರ್ಶ ಅನುಕರಣೀಯವಾದವುಗಳು.

"ಅಷ್ಟಮಿ, ನವಮಿ ಎಂಬ ಕಲ್ಪಿತವೇಕೇ ಶರಣಂಗೆ?
ತಪ್ಪಿತ್ತು ಗಣಪದವಿ, ಲಿಂಗಕ್ಕೆ ದೂರ, ಜಂಗಮಕ್ಕೆ ದೂರ!
ಒಬ್ಬರಿಗಾಳಾಗಿ ಒಬ್ಬರನೊಲೈಸುವ ನಿರ್ಬುದ್ಧಿ ಮನುಜ
ರೇನೇನೆಂಬೆ ಕೂಡಲಸಂಗಮದೇವಾ"[೧]

ಅಷ್ಟಮಿ, ನವಮಿ ಎಂದು ಆಚರಣೆ ಮಾಡುವವರು ಗುರು–ಲಿಂಗ–ಜಂಗಮಕ್ಕೆ ದೂರರು. ಒಬ್ಬರಿಗೆ ಆಳಾಗಿ ಮತ್ತೊಬ್ಬರನ್ನು ಓಲೈಸುವ ನಿರ್ಬುದ್ಧಿಯ ಮನುಜರೆಂದು ಟೀಕಿಸಿದ್ದಾರೆ.

"ವಾರವೆಂದರಿಯೆ; ದಿನವೆಂದರಿಯೆ
ಏನೆಂದರಿಯೆನಯ್ಯಾ
ಇರುಳೆಂದರಿಯೆ, ಹಗಲೆಂದರಿಯೆ, ಏನೆಂದರಿಯನಯ್ಯಾ!
ನಿಮ್ಮವ ಪೂಜಿಸಿ ಎನ್ನುವ ಮರೆದೆ
ಕೂಡಲಸಂಗಮದೇವಾ"[೨]

ಲಿಂಗಪೂಜೆಗೆ ವಾರ, ದಿನ, ಇರುಳು, ಹಗಲು ಎಂಬ ನೇಮವಿಲ್ಲ. ಮನಸ್ಸಿದ್ದಾಗ ಯಾವ ದಿನ, ಎಷ್ಟೊತ್ತಿಗಾದರೂ ಸರಿಯೇ. ಭಗವಂತನ ಒಲುಮೆಗೆ ಮನಸ್ಸು ಸದಾ ತುಡಿಯುತ್ತಿರಬೇಕೇ ವಿನಃ ದಿನ ಗಳಿಗೆಗಾಗಿ ಕಾಯುವುದು ಮೂರ್ಖತನ ಎಂದಿದ್ದಾರೆ.

---

೧. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೧೫೫, ವ. ೬೧೯
೨. ಅದೇ ಪುಸ್ತಕ, ಪು. ೧೧೮, ವ. ೪೯೦

ಬಸವಣ್ಣನವರು ದೇವರ ಹೆಸರಿನಲ್ಲಿ ಹಬ್ಬದ ಹರಕೆಯ ಹೆಸರಿನಲ್ಲಿ ಪ್ರಾಣಿಬಲಿ ಕೊಡುವವರನ್ನು ಈ ರೀತಿ ಟೀಕಿಸುತ್ತಾರೆ.

"ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು
ಕೊಂದಹರೆಂಬುದನರಿಯದೆ
ಬೆಂದವೊಡಲ ಹೊರೆಯ ಹೋಯಿತ್ತಲ್ಲದೆ!
ಅದಂದೇ ಹುಟ್ಟಿತ್ತು, ಅದಂದೇ ಹೊಂದಿತ್ತು
ಕೊಂದವರುಳಿದರೆ ಕೂಡಲಸಂಗಮದೇವಾ?"[೧]

ಹರಕೆಯ ಕುರಿ ತಾನು ಬಲಿಯಾಗುವುದನ್ನು ತಿಳಿಯದೇ ತಳಿರ ತೋರಣ ಮೇಯುತ್ತಿದೆ. ಅದು ಇಂದು ಅಳಿಯಬಹುದು. ಮುಂದೆ ಒಂದು ದಿನ ಕೊಂದವರೂ ಅಳಿಯುತ್ತಾರೆ ಎಂಬ ಎಚ್ಚರಿಕೆ ನೀಡಿ ಪ್ರಾಣಿಬಲಿಯನ್ನು ತೀವ್ರವಾಗಿ ಖಂಡಿಸುತ್ತಾರೆ.

**ಸ್ತ್ರೀಪುರುಷ ಸಮಾನತೆ**

ಶತಮಾನಗಳಿಂದಲೂ ಮೂಕವಾಗಿದ್ದ ಸ್ತ್ರೀಯರಿಗೂ ಪುರುಷರಂತೆ ಸಮಾನತೆಯ ಅಧಿಕಾರ ನೀಡಿದವರು ವಚನಕಾರರು. ಅವರ ಹಾದಿಯಲ್ಲಿ ೩೫ಕ್ಕೂ ಹೆಚ್ಚು ಶರಣೆಯರು ವಚನರಚನೆ ಮಾಡಿದ್ದಾರೆ. ಕಾಯಕ, ಆಧ್ಯಾತ್ಮಿಕತೆ, ಲಿಂಗಾಂಗ ಸಾಮರಸ್ಯ, ಬೌದ್ಧಿಕ ಚರ್ಚೆಯಲ್ಲೂ ಪುರುಷರಿಗೆ ಸರಿಸಾಟಿಯಾಗಿ ನಿಲ್ಲಲು ವಚನಕಾರ್ತಿಯರು ಸಾಕಷ್ಟು ಶ್ರಮಿಸಿದ್ದಾರೆ. "ಯಜಮಾನ ಸಂಸ್ಕೃತಿಯ ತುಳಿತಕ್ಕೆ ಶತಶತಮಾನಗಳಿಂದಲೂ ಒಳಗಾಗಿದ್ದ ಹೆಣ್ಣನ್ನು ಪ್ರಪಾತದಿಂದ ಮೇಲಕ್ಕೆತ್ತಿದ ಕೀರ್ತಿದ ಬಸವಾದಿ ಶರಣರದು. ಗಂಡಿನ ದೃಷ್ಟಿಯಲ್ಲಿ ಹೆಣ್ಣು ಕಲ್ಲಾಗಿ ಹೋಗಿದ್ದಳು. ತನ್ನನ್ನು ಉದ್ಧರಿಸುವ ರಾಮನ ಪ್ರತೀಕ್ಷೆಯಲ್ಲಿದ್ದಳು. ನಿರೀಕ್ಷೆ ಹುಸಿಯಾಗಲಿಲ್ಲ. ಇಂಥ ಮಾನವತಾವಾದಿಯೊಬ್ಬನಿಗೆ ಜನ್ಮ ನೀಡಿದಳು ಕನ್ನಡ ಮಾತೆ. ಅವರೇ ಕ್ರಾಂತಿಪುರುಷ ಬಸವಣ್ಣನವರು".[೨]

"ಶುಕ್ಲಶೋಣಿತ ಪಿಂಡೈಕ್ಯನ ಚಿತ್ತವಾಯು
ಆರುದಳದ ಪದ್ಮದಲ್ಲಿಹುದು
ಮೊಲೆ ಮೂಡಿ ಬಂದಡೆ ಹೆಣ್ಣೆಂಬರು

---

೧. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೩೫, ವ. ೧೨೯
೨. ವಚನಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೪೪

ಗಡ್ಡಮೀಸೆ ಬಂದಡೆ ಆ ಪಿಂಡವನು ಗಂಡೆಂಬರು
ನಡುವೆ ಸುಳಿವಾತ್ಮನು ಹೆಣ್ಣೂ ಅಲ್ಲ, ಗಂಡೂ ಅಲ್ಲ
ಇದರಂತುವ ತಿಳಿದುನೋಡಿಹೆನೆಂದಡೆ
ಶೃತಿಗೋಚರವೆಂದಾತನಂಬಿಗ ಚೌಡಯ್ಯ"[೧]

ಪಿಂಡೈಕ್ಯಸ್ಥಾನ ಮೂಲಾಧಾರದ ಆರದಳದ ಪದ್ಮದಲ್ಲಿದೆ. ಆ ಪಿಂಡಕ್ಕೆ ಮೊಲೆಮೂಡಿದರೆ ಹೆಣ್ಣು, ಗಡ್ಡ-ಮೀಸೆ ಬಂದರೆ ಗಂಡು. ಅಲ್ಲಿರುವ ಆತ್ಮಕ್ಕೆ ಗಂಡುಹೆಣ್ಣಿನ ಭೇದವಿಲ್ಲ ಎಂದು ಅಂಬಿಗರ ಚೌಡಯ್ಯ ಸ್ಪಷ್ಟಪಡಿಸಿದ್ದಾರೆ. ಇದೇ ಅರ್ಥ ಬರುವ ಜೇಡರ ದಾಸಿಮಯ್ಯನ ವಚನ ಹೀಗಿದೆ:

"ಮೊಲೆ ಮೂಡಿ ಬಂದಡೆ ಹೆಣ್ಣೆಂಬರು
ಗಡ್ಡಮೀಸೆ ಬಂದಡೆ ಗಂಡೆಂಬರು
ನಡುವೆ ಸುಳಿವ ಆತ್ಮನು
ಹೆಣ್ಣೂ ಅಲ್ಲ, ಗಂಡೂ ಅಲ್ಲ ಕಾಣಾ ರಾಮನಾಥ"[೨]

ಆತ್ಮಕ್ಕೆ ಗಂಡು-ಹೆಣ್ಣಿನ ಭೇದವಿಲ್ಲ. ಸಕಲ ಜೀವಾತ್ಮರಲ್ಲೂ ಭಗವಂತ ನೆಲೆಸಿರುತ್ತಾನೆ. ಶರಣರ ದೃಷ್ಟಿಯಲ್ಲಿ ಸಮಾಜದಲ್ಲಿನ ಎರಡು ವಿಂಗಡನೆಯೆಂದರೆ ಗಂಡು-ಹೆಣ್ಣಲ್ಲ; ಭಕ್ತ ಮತ್ತು ಭವಿ.

"ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ
ಸತಿಪತಿಗಳೊಂದಾಗದವನ ಭಕ್ತಿ
ಅಮೃತದೊಳು ವಿಷಬೆರೆತಂತೆ ಕಾಣಾ ರಾಮನಾಥ"[೩]

ಸತಿಪತಿಗಳು ಒಂದಾಗಿದ್ದರೆ ಶಿವನಿಗೆ ಪ್ರಿಯವಾದುದು. ಅವರಿಬ್ಬರೂ ಬಾಳಿನ ಗಾಡಿಯ ಎರಡು ಬಂಡಿಗಳು. ಇಲ್ಲವಾದರೆ ಅಮೃತದಲ್ಲಿ ವಿಷ ಬೆರೆತಂತೆ ಬದುಕೇ ನಾಶವಾಗಬಹುದೆಂದು ಎಚ್ಚರಿಸಿದ್ದಾರೆ. ವಚನಕಾರರಾರು ಸಾಂಸಾರಿಕ ವಿರೋಧಿಗಳಲ್ಲ. ಸಂಸಾರದಲ್ಲಿದ್ದುಕೊಂಡೇ ಸಾಧನೆಯ ಶಿಖರಕ್ಕೇರಿದವರು.

"ಇಂದ್ರಿಯ ನಿಗ್ರಹ ಮಾಡಿದರೆ, ಹೊಂದುವುವು ದೋಷಂಗಳು
ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು

---

೧. ಸಂ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೮೫, ವ. ೨೬೩
೨. ಸಂ.ವ.ಸಂ., ಸಂ.: ಡಾ॥ ಎಸ್.ವಿದ್ಯಾಶಂಕರ, ಪು. ೫೯, ವ. ೧೩೬
೩. ಸಂ.ವ.ಸಂ. ೨, ಸಂ.: ಡಾ॥ ಎಸ್.ವಿದ್ಯಾಶಂಕರ್, ಪು. ೨೬೩, ವ. ೧೫೨

ಸತಿಪತಿರತಿ ಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು
ಸತಿಪತಿರತಿ ಭೋಗೋಪಭೋಗಸುಖ ವಿಳಾಸವ ಬಿಟ್ಟನೆ ಸಿಂಧುಬಲ್ಲಾಳನು?
ನಿಮ್ಮ ಮುಟ್ಟಿ ಪರಧನ ಪರಸತಿಯರಿಗಳಿಸಿದಡೆ
ನಿಮ್ಮಾಚರಕ್ಕೆ ದೂರ ಕೂಡಲಸಂಗಮದೇವಾ"[೧]

ಸಿಂಧುಬಲ್ಲಾಳ, ಸಿರಿಯಾಳರು ಸತಿಪತಿರತಿ ಸುಖವ ಬಿಡಲಿಲ್ಲ. ಸಂಸಾರದ ಅವಶ್ಯಕತೆ ಅರಿತು ಅದನ್ನು ಆಧ್ಯಾತ್ಮೀಕರಣಗೊಳಿಸಿದರು. ಸಂಸಾರಕ್ಕೆ ಪವಿತ್ರ ಸ್ಥಾನಮಾನ ನೀಡಿ ಪರಸತಿ ಪಾರ್ವತಿಯ ಸಮಾನ ಎಂದು ಗೌರವಿಸಿದರು. ಇಂದ್ರಿಯ ನಿಗ್ರಹ ಮಾಡಿದರೆ ದೋಷಂಗಳು ಮುಂದೆ ಬಂದು ಕಾಡುವುವು. ನಿರಾಕರಣೆ ಮುಖ್ಯವೆನಿಸುವುದಿಲ್ಲ; ಇದ್ದು ಗೆಲ್ಲುವುದು ಮುಖ್ಯ ಎಂದರು.

**ಕಾಯಕ ಪರಿಕಲ್ಪನೆ:**

ಇಡೀ ಪ್ರಪಂಚದಲ್ಲಿ 'ಕಾಯಕ'ಕ್ಕೆ ದೈವೀ ಸ್ವರೂಪವನ್ನು ತಂದುಕೊಟ್ಟವರು ವಚನಕಾರರು. ಯಾವುದೇ ಕಾಯಕವಾದರೂ ಸಮಾನ ದೃಷ್ಟಿಯಿಂದ ಕಂಡವರು. ಯಾವುದೇ ಕಾಯಕವಾದರೂ ಲಿಂಗಾರ್ಪಿತವಾದಾಗಲೇ ಅದರಿಂದ ಸಂಪಾದಿಸುದುದಕ್ಕೆ ಬೆಲೆ. ವಚನಯುಗದಲ್ಲಿ ಹಲವಾರು ಶರಣರು ವಿವಿಧ ಕಾಯಕವನ್ನು ಮಾಡುತ್ತಿದ್ದರು. ದೋಣಿ ನಡೆಸುವ ಅಂಬಿಗರ ಚೌಡಯ್ಯ, ಕಸಗುಡಿಸುವ ಸತ್ಯಕ್ಕ, ನೇಯ್ಗೆಕಾರ ಜೇಡರದಾಸಿಮಯ್ಯ, ಅಮುಗಿದೇವಯ್ಯ, ಕಟ್ಟಿಗೆ ಕಾಯಕದ ಮೋಳಿಗೆ ಮಾರಯ್ಯ, ದನಕಾಯುವ ತುರುಗಾಹಿರಾಮಣ್ಣ, ಎಣ್ಣೆ ತೆಗೆಯುವ ಗಾಣದ ಕನ್ನಯ್ಯ, ಕೊಟ್ಟಣ ಕಾಯಕದ ಸೋಮವ್ವ, ತೆರಿಗೆ ಸಂಗ್ರಹದ ಸುಂಕದ ಬಂಕಣ್ಣ, ಬಿದಿರಿನ ಕಾಯಕದ ಮೇದಾರ ಕೇತಯ್ಯ ಹೀಗೆ ಹತ್ತು ಹಲವಾರು ಕಾಯಕ ಮಾಡುತ್ತಿದ್ದ ಶಿವಶರಣರು ಲಿಂಗಭೇದ ಮರೆತು ಶಿವಾರ್ಪಿತ ಸತ್ಯಶುದ್ಧ ಕಾಯಕದಲ್ಲಿ ನಿರತರಾಗಿರುತ್ತಿದ್ದರು.

"ದೇವಸಹಿತ ಭಕ್ತಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡನಾದಡೆ
ನಿಮ್ಮಾಣೆ! ನಿಮ್ಮ ಪುರಾತನರಾಣೆ! ತಲೆದಂಡ! ತಲೆದಂಡ!
ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸಿದಡೆ
ನಿಮ್ಮ ರಾಣಿವಾಸದಾಣೆ!"[೨]

---

೧. ಬ.ವ.ಸಂ., ಸಂ.: ಡಾ॥ ಎಂ.ಎಂ.ಕಲಬುರ್ಗಿ, ಪು. ೧೬೦, ವ. ೬೩೯
೨. ಅದೇ ಪುಸ್ತಕ, ಪು. ೨೪, ವ. ೮೩

ಲಿಂಗಧಾರಿ ಭಕ್ತ ಮನೆಗೆ ಬಂದರೆ ಯಾವ ಜಾತಿ ಎಂದು, ಯಾವ ಕೆಲಸದಲ್ಲಿದ್ದೀರಿ ಎಂದು ಕೇಳಿದರೆ ಪುರಾತನರ ಆಣೆ. ಕೇಳಿದ್ದೇ ಆದರೆ ತಲೆದಂಡವಾಗಲಿ ಎಂದಿದ್ದಾರೆ. ಜೊತೆಗೆ ಪಾರ್ವತಿಯ ಮೇಲೆ ಪ್ರಮಾಣ ಮಾಡಿ ಅದರಂತೆ ಸಮಾಜದಲ್ಲೂ ಪರಿವರ್ತನೆ ತರಲು ಪ್ರಯತ್ನಿಸಿದರು.

"ಆವ ಕಾಯಕದಲ್ಲಿ ಬಂದಡೂ ಭಾವಶುದ್ಧವಾಗಿ
ಗುರುಲಿಂಗ ಜಂಗಮಕ್ಕೆ ಮಾಡುವುದೇ ಪೂಜೆ
ಮಾಡುವ ಮಾಟವಿಲ್ಲದೆ, ಮಾತಿಂಗೆ ಮಾತಾಡುವುದು ಅದೇತರ ಪೂಜೆ
ಅದು ಚಂದೇಶ್ವರ ಲಿಂಗಕ್ಕೆ ಒಪ್ಪವಲ್ಲಾ ಮಡಿವಾಳಯ್ಯ"[೧]

ಯಾವುದೇ ಕಾಯಕವಾದರೂ ಭಾವಶುದ್ಧದಿಂದ ಮಾಡಿದರೆ ಗುರುಲಿಂಗಜಂಗಮಕ್ಕೆ ಅರ್ಪಿತವಾಗುತ್ತದೆ. ಹಾಗೆ ಮಾಡದೆ ವ್ಯರ್ಥವಾಗಿ ಸಮಯ ಕಳೆದು ಕಾಯಕದ ಹೊತ್ತಿನಲ್ಲಿ ಮಾತಿನಲ್ಲಿ ತೊಡಗಿ ಸಮಯ ವ್ಯರ್ಥಮಾಡಿ, ಕಾಯಕ ದ್ರೋಹವೆಸಗಿದರೆ ಅದು ಲಿಂಗಕ್ಕೆ ಅರ್ಪಿತವಿಲ್ಲ ಎನ್ನುವ ಶರಣರ ಆಶಯ ಇಂದಿಗೂ ಅನುಕರಣೀಯವಾದುದು.

ಇಂದಿನ ಕಾಲದಲ್ಲಂತೂ ಕೆಲಸ, ಕಾರ್ಯವೆಂದರೆ ಆಲಸ್ಯದಲ್ಲಿ ತೊಡಗುವ ಜನರಿಗೆ ಶರಣರ ಸತ್ಯಶುದ್ಧ ಕಾಯಕ ಆದರ್ಶನೀಯವಾದುದು. 'ಭ್ರಷ್ಟಾಚಾರ' ಇಂದಿನ ಸಾಮಾಜಿಕ ಪಿಡುಗು. ವಚನಕಾರರ ಆದರ್ಶ ನಿಲುವನ್ನು ಪಾಲಿಸಿದ್ದರೆ ಇಂದು ಭ್ರಷ್ಟಾಚಾರದ ಸುಳಿವೇ ಇರುತ್ತಿರಲಿಲ್ಲ. ಚೆನ್ನಬಸವಣ್ಣ ಭ್ರಷ್ಟಾಚಾರದಿಂದ ಸಂಪಾದನೆ ಮಾಡುವವರನ್ನು ಈ ರೀತಿ ಖಂಡಿಸುತ್ತಾರೆ.

"ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಧನವ ಗಳಿಸಿತಂದು
ಗುರುಲಿಂಗ ಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡಿ
ಭಕ್ತರಾದವೆಂಬವರನೆನಗೆ ತೋರದಿರಯ್ಯ"...[೨]

ದೇಹಬಳಲದೆ, ಅನ್ಯಮಾರ್ಗವಿಡಿದು ಹಣಗಳಿಸಿ ತಂದು ಗುರುಲಿಂಗ ಜಂಗಮಕ್ಕೆ ಅರ್ಪಿಸಿ ದಾಸೋಹ ಮಾಡುವವರು ಭಕ್ತರಲ್ಲ. ಅವರನ್ನು ತೋರದಿರುವಂತೆ ಮೊರೆಯಿಡುತ್ತಾರೆ. ಒಮ್ಮೆ ಆಯ್ದಕ್ಕಿ ಮಾರಯ್ಯ ಅಗತ್ಯಕ್ಕಿಂತ ಹೆಚ್ಚಿನ ಅಕ್ಕಿಯನ್ನು ಮನೆಗೆ ತಂದಾಗ ಲಕ್ಕಮ್ಮ ರೀತಿ ಎಚ್ಚರಿಸುತ್ತಾಳೆ.

---

೧. ಸಂಕೀರ್ಣ ವಚನ ಸಂಪುಟ, ಸಂ. ಡಾ॥ ಎಸ್.ವಿದ್ಯಾಶಂಕರ, ಪು. ೪೦೭, ವ. ೧೨೮೪
೨. ಚೆನ್ನಬಸವಣ್ಣನವರ ವಚನ ಸಂಪುಟ, ಸಂ. ಡಾ. ಬಿ.ವ್ಹಿ.ಮಲ್ಲಾಪುರ

"ಆಸೆಯೆಂಬುದು ಅರಸಿಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ?
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ?
ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ
ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ದೂರಮಾರಯ್ಯ"೧

ಆಸೆಯು ಅರಸನಿಗಿರಬೇಕೇ ಹೊರತು ಶಿವಭಕ್ತರಿಗಲ್ಲ. ರೋಷ ಯಮದೂತರ ಗುಣವೇ ಹೊರತು ಹುಟ್ಟು ಸಾವು ಗೆದ್ದಿರುವ ಅಜಾತ (ಜಂಗಮ)ನಿಗಲ್ಲ. ಇಷ್ಟೊಂದು ಅಕ್ಕಿಯ ಆಸೆ ಸಲ್ಲದು, ಅಮರೇಶ್ವರ ಲಿಂಗ ಒಪ್ಪುವುದಿಲ್ಲ. ಅತಿಯಾಸೆ ಸಲ್ಲದೆಂಬ ಲಕ್ಕಮ್ಮನ ನಿಲುವು ಇಂದಿನ ಸ್ತ್ರೀಯರಿಗೂ ಅನ್ವಯವಾಗುವುದು. ಸಂಗ್ರಹ ಬುದ್ಧಿ ಒಳ್ಳೆಯದಲ್ಲ ಎಂಬುದಿಲ್ಲಿ ವೇದ್ಯ. ಕಾಯಕದಲ್ಲಿ ತೊಡಗಿ ಅನ್ಯವಿಚಾರಗಳಿಗೆ ಮನಸ್ಸು ನೀಡಿ ಕಾಯಕ ದ್ರೋಹ ಮಾಡುವವರಿಗೆ ಮಾರಯ್ಯ ಹೀಗೆ ಹೇಳಿರುತ್ತಾನೆ.

"ಕಾಯಕದಲ್ಲಿ ನಿರತನಾದಡೆ
ಗುರುದರ್ಶನವಾದಡೂ ಮರೆಯಬೇಕು,
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದೆ ನಿಂದಿದ್ದಡೂ
ಹಂಗ ಹರಿಯಬೇಕು
ಕಾಯಕವೆ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದಡೂ
ಕಾಯಕದೊಳಗು"೨

ಗುರು-ಲಿಂಗ-ಜಂಗಮಕ್ಕೆ ಪ್ರಧಾನ ಆದ್ಯತೆ ನೀಡಿದ್ದ ವಚನಕಾರರು 'ಕಾಯಕ'ಕ್ಕೆ ಅದಕ್ಕಿಂತಲೂ ಉನ್ನತ ಸ್ಥಾನನೀಡಿ ಕಾಯಕದಿಂದಲೇ ಕೈಲಾಸ ಕಾಣಬಹುದೆಂದು ತಮ್ಮ ಕಾಯಕವನ್ನು ಶಿವಸ್ವರೂಪಿ ಮಾಡಿಕೊಂಡ ಪರಿಕಲ್ಪನೆ ಜಗತ್ತಿಗೆ ಶರಣರು ಕೊಟ್ಟ ಉಡುಗೊರೆ. ಇಂದಿನ ಯುಗದಲ್ಲಿ ಸಮಯ ಕಳೆಯಲು ಟಿ.ವಿ, ಕಂಪ್ಯೂಟರ್, ಮೊಬೈಲ್, ಇಂಟರ್‌ನೆಟ್‌ಗಳ ಮುಂದೆ 'ಕಾಯಕ' ಸಿದ್ಧಾಂತದ ಬೆಲೆ ಅಗಣಿತವಾದುದು. ಕಾಯಕ ಮರೆತು ನಿಂತಿದ್ದ

---

೧. ಶಿವಸಂ., ಡಾ. ವೀರಣ್ಣ ರಾಜೂರ, ಪು. ೨೨೦, ವ. ೭೧೦
೨. ಸಂಕೀರ್ಣ ವಚನ ಸಂಪುಟ, ಡಾ. ಎಂ.ಎಂ.ಕಲಬುರ್ಗಿ, ಪು. ೩೬೯, ವ. ೧೧೭೭

ಮಾರಯ್ಯನಿಗೆ ಲಕ್ಕಮ್ಮ ಎಚ್ಚರಿಸುತ್ತಾಳೆ. ಒಂದು ರೀತಿ ಲಕ್ಕಮ್ಮ ಮಾರಯ್ಯನಿಗೆ ಗುರುವಾಗಿದ್ದಾಳೆ.

"ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ
ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯತಪ್ಪಲ ಅಕ್ಕಿಯತಂದು
ನಿಶ್ಚೈಸಿ ಮಾಡಬೇಕು ಮಾರಯ್ಯ ಪ್ರಿಯ ಅಮರೇಶ್ವರ
ಲಿಂಗಕ್ಕೆ ಬೇಗಹೋಗು ಮಾರಯ್ಯ"[೧]

ಕಾಯಕಕ್ಕೆ ಹೊತ್ತಾಯಿತು ಹೋಗಬೇಕೆಂದು ಮತ್ತು ಆ ಕಾಯಕ ಭಾವಶುದ್ಧವಾಗಿ ಮಾಡಬೇಕೆಂದು. ಅದರಿಂದ ಬಂದುದರಲ್ಲಿ ಜಂಗಮ ದಾಸೋಹ ಮಾಡಬೇಕೆಂದು ಸೂಚಿಸಿದ್ದಾರೆ. ಇಂದು ಮನುಷ್ಯ ಮನುಷ್ಯರ ನಡುವೆ ಬಾಂಧವ್ಯವೇ ಕಳೆದುಹೋಗುತ್ತಿರುವಾಗ, ನೆಂಟರಿಷ್ಟರಿಗೇಕೆ ಸ್ವತಃ ತಂದೆತಾಯಿಯರಿಗೂ, ಸಹೋದರ ಸಹೋದರಿಯರಿಗೆ ಉಣಲಿಕ್ಕದವರು ಅನ್ಯರಿಗೆ ನೀಡುತ್ತಾರೆಯೇ? ಅತಿಥಿ ದೇವೋಭವ ಎಂಬುದು ಶರಣರ, ವಚನಕಾರರ ನಿಲುವು. "ಶರಣರು ಭೋಗೈಕ ದೃಷ್ಟಿಯನ್ನು ಒಪ್ಪುವುದಿಲ್ಲ. ಅದರ ಜೊತೆಗೆ ವೈರಾಗ್ಯವನ್ನೂ ಒಪ್ಪುವುದಿಲ್ಲ. ವಚನಕಾರರು ಪ್ರತಿಪಾದಿಸಿದ ಅರ್ಥಶಾಸ್ತ್ರ ಮತ್ತು ಆಧುನಿಕ ಅರ್ಥಶಾಸ್ತ್ರದಲ್ಲಿ ಮುಖ್ಯ ಅಂತರವೆಂದರೆ – ಆಧುನಿಕ ಅರ್ಥಶಾಸ್ತ್ರದಲ್ಲಿ ನೈತಿಕಮೌಲ್ಯಗಳಿಗೆ ಪ್ರಾಧಾನ್ಯತೆಯಿಲ್ಲ. ಹೆಚ್ಚಿನ ಲಾಭ ಗಳಿಸುವಾಗ ಆಧುನಿಕ ಮಾನವನು ನೈತಿಕ ಮೌಲ್ಯಗಳಿಗೆ ಅಷ್ಟು ಮಹತ್ವ ಕೊಡಲಾರ.... ಆದರೆ ವಚನಕಾರರ ಆರ್ಥಿಕ ವ್ಯವಸ್ಥೆ ಧರ್ಮದ ತಳಹದಿಯ ಮೇಲೆ ನಿಂತಿದೆ. ಧರ್ಮವನ್ನು ಬಿಟ್ಟು ಯಾವ ಚಟುವಟಿಕೆಗಳೂ ಇಲ್ಲ. ಇಲ್ಲಿ ಸುಳ್ಳು, ಮೋಸ ಮತ್ತು ಅನೀತಿಗೆ ಆಸ್ಪದವಿಲ್ಲ. ವಚನಕಾರರ ಆರ್ಥಿಕ ವ್ಯವಸ್ಥೆ ಎರಡು ಮುಖ್ಯ ಪರಿಕಲ್ಪನೆಯ ತಳಹದಿಯ ಮೇಲೆ ನಿಂತ ವ್ಯವಸ್ಥೆಯಾಗಿದೆ. ಅವು ಯಾವುವೆಂದರೆ 'ಕಾಯಕ' ಮತ್ತು 'ದಾಸೋಹ'.[೨]

'ಸೋಹಂ' ಎಂದೆನಿಸದಿರಯ್ಯ, 'ದಾಸೋಹಂ' ಎಂದೆನಿಸಯ್ಯ'. ಇದು ಬಸವಣ್ಣನವರ ಪ್ರಸಿದ್ಧ ಮಾತು. ಕಾಯಕದಿಂದ ಬಂದ ಹಣದಲ್ಲಿ ಜೀವನಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಇಟ್ಟುಕೊಂಡು 'ದಾಸೋಹ'ಕ್ಕೆ ಜಂಗಮಸೇವೆಗೆ ಹಣವನ್ನು ವ್ಯಯಿಸುತ್ತಿದ್ದರು.

"ತನುವಿಡಿದು ದಾಸೋಹವ ಮಾಡಿ
ಗುರು ಪ್ರಸಾದಿಯಾದ ಬಸವಣ್ಣ.
ಮನಮಿಡಿದು ದಾಸೋಹವ ಮಾಡಿ

---

೧. ಶಿಶವಸಂ., ಸಂ. ಡಾ. ವೀರಣ್ಣ ರಾಜೂರ, ಪು. ೨೨೦, ವ. ೭೧೩
೨. ವಚನಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೭೫

ಲಿಂಗ ಪ್ರಸಾದಿಯಾದ ಬಸವಣ್ಣ.
ಧನವಿಡಿದು ದಾಸೋಹವ ಮಾಡಿ
ಜಂಗಮ ಪ್ರಸಾದಿಯಾದ ಬಸವಣ್ಣ
ಇಂತೀ ತ್ರಿವಿಧವಿಡಿದು ದಾಸೋಹವ ಮಾಡಿ
ಸದ್ಗುರು ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಬಸವಣ್ಣ ಸ್ವಯಂ ಪ್ರಸಾದಿಯಾದ"[೧]

ಇಡೀ ಜಗತ್ತಿನಲ್ಲೇ ಎಲ್ಲಾ ವರ್ಗದವರೂ ಒಂದು ಕಡೆ ಕುಳಿತು ಪ್ರಸಾದ ಸ್ವೀಕರಿಸುವ ಕಲ್ಪನೆಯ ಮೂಲ ವಚನಕಾರರದ್ದು. ತನು-ಮನ-ಧನವನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಬೇಕೆಂದು ವಚನಕಾರರ ನಿಲುವಾಗಿತ್ತು. ಈ ತ್ರಿವಿಧ ದಾಸೋಹ ಮಾಡಿ ತಾನೇ ಸ್ವಯಂ ಪ್ರಸಾದಿಯಾದರು ಬಸವಣ್ಣ. ಅಕ್ಕಮಹಾದೇವಿಯವರು ದಾಸೋಹ ಕುರಿತಂತೆ,

"ಸೋಹಂ ಎಂಬುದದು ಅಂತರಂಗದಮದ ನೋಡಯ್ಯಾ
ಶಿವೋಹಂ ಎಂಬುದದು ಬಹಿರಂಗದ ಮದ ನೋಡಯ್ಯಾ
ಈ ದ್ವಂದ್ವವನಳಿದು ದಾಸೋಹಂ' ಎಂದೆನಿಸಯ್ಯಾ
ಕಪಿಲ ಸಿದ್ಧಮಲ್ಲಿಕಾರ್ಜುನ"[೨]

'ಸೋಹಂ' ಎಂಬುದು ಅಂತರಂಗದ ಅಹಂಕಾರ ಮದ. ತನಗಾಗಿ ಎಂಬ ಸ್ವಾರ್ಥ. 'ಶಿವೋಹಂ' ಶಿವಭಕ್ತರ ಬಹಿರಂಗದ ಆಚರಣೆಗಳೂ ಸಹ ಮದವೇ. ಈ ದ್ವಂದ್ವ ಅಳಿದು 'ದಾಸೋಹಂ' ಎಂದು ಮಾಡುವ ಆಚರಣೆಯೇ ಶ್ರೇಷ್ಠ ಎಂಬುದು ಸಿದ್ಧರಾಮರ ಅನಿಸಿಕೆ.

"ಶಾಸ್ತ್ರಘನವೆಂಬೆನೆ? ಕರ್ಮವ ಭಜಿಸುತ್ತಿದೆ!
ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ!
ಶ್ರುತಿ ಘನವೆಂಬೆನೆ? ಮುಂದಿಟ್ಟರಸುತ್ತಿದೆ!
ಅಲ್ಲೆಲ್ಲಿಯೂ ನೀವಿಲ್ಲದ ಕಾರಣ
ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು ಕೂಡಲ ಸಂಗಮದೇವನ!"[೩]

'ದಾಸೋಹ'ದ ಮುಂದೆ ಶಾಸ್ತ್ರ, ವೇದ, ಶ್ರುತಿಗಳೂ ಸಮವಾಗಲಾರವು. ಶಾಸ್ತ್ರವು ಬರೀ ಕರ್ಮ ಸಿದ್ಧಾಂತವನ್ನು ಹೇಳುತ್ತದೆ. ವೇದ, ಪುರಾಣಗಳು ಪ್ರಾಣಿಹಿಂಸೆಯ ಬಗೆಗೆ ಹೇಳುತ್ತವೆ. ಶ್ರುತಿಗಳಿಗೆ ಭವಿಷ್ಯತ್ತಿನ ಚಿಂತೆ. ಅಲ್ಲೆಲ್ಲಿಯೂ ಭಗವಂತನಿಲ್ಲ. ಎಲ್ಲವೂ ತಮ್ಮ

---

೧. ಶಿಶವಸಂ., ಸಂ. ಡಾ. ವೀರಣ್ಣ ರಾಜೂರ
೨. ಸಿದ್ಧರಾಮೇಶ್ವರ ವಚನ ಸಂಪುಟ, ಸಂ. ಡಾ|| ಎಸ್.ವಿದ್ಯಾಶಂಕರ್, ಪು. ೪೨೯, ವ. ೧೪೮೭
೩. ಬ.ವ.ಸಂ., ಸಂ. ಡಾ|| ಎಂ.ಎಂ.ಕಲಬುರ್ಗಿ, ಪು. ೫೨, ವ. ೨೦೮

ಚಿಂತೆಯಲ್ಲಿಯೇ ತೊಳಲಾಡುತ್ತಿವೆ. ತ್ರಿಕರಣಪೂರಕವಾಗಿ ಕಾಯ, ವಾಚ, ಮನಸಾ ಮಾಡುವ ದಾಸೋಹದಲ್ಲಿ ಭಗವಂತನಿದ್ದಾನೆಂದಿದ್ದಾರೆ.

"ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಗುಟುಕ ಕಂಡಡೆ ಕೂಗಿ ಕರೆಯದೆ
ತನ್ನ ಕುಲವನೆಲ್ಲವ?
ಶಿವಭಕ್ತನಾಗಿ ಹುಟ್ಟಿ ಭಕ್ತಿಪಕ್ಷವಿಲ್ಲದಿದ್ದರೆ
ಕಾಗೆಕೋಳಿಗಳಿಗಿಂತ ಕರಕಷ್ಟನರನಬಾಳುವೆ
ಕೂಡಲಸಂಗಮದೇವಾ"[೧]

ಹಂಚಿಕೊಂಡು ತಿನ್ನುವ ಮನೋಭಾವವನ್ನು ಮನುಷ್ಯರು ಪ್ರಾಣಿಪಕ್ಷಿಗಳಿಂದ ಕಲಿಯಬೇಕಾಗಿದೆ. ಇಂದಿಂಗೆ, ನಾಳಿಂಗೆ ಎಂದು ಬಚ್ಚಿಡುವವರೇ ಹೆಚ್ಚು. ಭಕ್ತನಾಗಿ ಹುಟ್ಟಿ ಒಂದಿಷ್ಟು ದಾಸೋಹ ಸಂಪನ್ನನಾಗದಿದ್ದರೆ ಕಾಗೆ, ಕೋಳಿಗಳಿಗಿಂತಲೂ ಕೀಳು ಎಂದು ಬಸವಣ್ಣ ವಿಡಂಬಿಸಿದ್ದಾರೆ.

ಸಮಾಜದ ಜನತೆಯು ತಪ್ಪಿ ನಡೆಯದಂತೆ ಆಗಾಗ ಶರಣರ ವಚನಗಳು ನಮಗೆ ಮಾರ್ಗದರ್ಶಕವಾಗಿವೆ. ಸುಳ್ಳು, ಭ್ರಷ್ಟಾಚಾರ, ಲಂಚಗುಳಿತನ, ಅತಿಸ್ಥೂಲಕಾಯ ಹೀಗೆ ಹಲವು ಕಾಯಿಲೆಗಳಿಂದ ಬಳಲುವ ಜನರಿಗೂ ವಚನಗಳು ತಿಳುವಳಿಕೆಯನ್ನು ಒದಗಿಸುತ್ತವೆ.

"ನುಡಿಯಲುಬಾರದು ಕೆಟ್ಟನುಡಿಗಳ
ನಡೆಯಲು ಬಾರದು ಕೆಟ್ಟನಡೆಗಳ
ನುಡಿದಡೇನು ನುಡಿಯದಿರ್ದಡೇನು?
ಹಿಡಿದ ವ್ರತ ಬಿಡದಿರಲು ಅದೇ ಮಹಾಜ್ಞಾನದಾಚರಣೆ
ಎಂಬೆನು ಅಜಗಣ್ಣ ತಂದೆ"[೨]

ಕೆಟ್ಟನುಡಿ, ಕೆಟ್ಟನಡೆಯನ್ನು ಶರಣರು ಬಯಸುತ್ತಿರಲಿಲ್ಲ. "ನುಡಿದರೆ ಮುತ್ತಿನ ಹಾರದಂತಿರಬೇಕು, ಲಿಂಗಮೆಚ್ಚಿ ಅಹುದನಬೇಕು", "ಅಯ್ಯಾ ಎಂದರೆ ಸ್ವರ್ಗ; ಎಲವೋ ಎಂದರೆ ನರಕ", ಹೀಗೆ ಮಾತಿನಿಂದಲೇ ಪರಸ್ಪರರಲ್ಲಿ ವಿಶ್ವಾಸಮೂಡಬೇಕು. ನುಡಿಯೊಂದು ಪರಿ ನಡೆಯೊಂದು ಪರಿಯಾದರೆ ದೇವನೊಲಿಯುವುದಿಲ್ಲ ಎಂದರ್ಥ.

---

೧. ಬ.ವ.ಸಂ., ಸಂ. ಡಾ॥ ಎಂ.ಎಂ.ಕಲಬುರ್ಗಿ, ಪು. ೧೦೬, ವ. ೪೩೮
೨. ಶಿಶವಸಂ., ಸಂ. ಡಾ. ವೀರಣ್ಣ ರಾಜೂರ, ಪು. ೩೩೨, ವ. ೧೧೨೨

"ನಡೆಶುಚಿ, ನುಡಿಶುಚಿ, ತನುಶುಚಿ, ಮನಶುಚಿ, ಭಾವಶುಚಿ
ಇಂತಿ ಪಂಚ ತೀರ್ಥಂಗಳನೊಳಕೊಂಡು ಮರ್ತ್ಯದಲ್ಲಿನಿಂದ
ನಿಮ್ಮ ಶರಣರತೋರಿಎನ್ನನು ಉಳಿಸಿಕೊಳ್ಳಿ
ಚೆನ್ನಮಲ್ಲಿಕಾರ್ಜುನ"[೧]

ನಡೆನುಡಿ, ತನು, ಮನ, ಭಾವಗಳೆಲ್ಲಾ ಶುಚಿಯಾಗಿರಬೇಕು. ಹಾಗಿದ್ದವರು ಮಾತ್ರ ಶರಣನೆನಿಸುತ್ತಾನೆ. ಆತನನ್ನು ಮಾತ್ರ ತೋರಿರೆ ಎಂದು ಅಕ್ಕಮಹಾದೇವಿ ಮೊರೆಯಿಡುತ್ತಾರೆ. ಈ ಮರ್ತ್ಯದಲ್ಲಿಂದ ತನ್ನನ್ನು ಉಳಿಸಿಕೊಳ್ಳುವವರು ಶರಣರು ಮಾತ್ರ. ಆ ಶರಣರು ಪಂಚತೀರ್ಥಂಗಳಿಂದ ಶುದ್ಧಿಗೊಂಡಿರಬೇಕೆಂದಿದ್ದಾರೆ. ಸಮಾಜದಲ್ಲಿ ಸಿರಿವಂತಿಕೆ ಎಂಥವರನ್ನಾದರೂ ಬದಲಾಯಿಸಿಬಿಡುತ್ತದೆ. "ಸಿರಿ ಬಂದವನು ಅರ್ಧರಾತ್ರಿಯಲ್ಲಿ ಕೊಡೆ ಹಿಡಿದನು" ಎಂಬ ಗಾದೆಯಂತೆ ತನ್ನ ಅಹಂಕಾರವನ್ನು ಪ್ರದರ್ಶಿಸುತ್ತಾನೆ. ಅಂಥವನನ್ನು ಕುರಿತು ಬಸವಣ್ಣನವರು –

"ಹಾವುತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಲುಬಹುದು
ಸಿರಿಗರ ಹೊಡೆದವರ ನುಡಿಸಲುಬಾರದು, ನೋಡಯ್ಯ!
ಬಡತನವೆಂಬ ಮಂತ್ರವಾದಿ ಹೊಗಲು
ಒಡನೆನುಡಿವರಯ್ಯ ಕೂಡಲಸಂಗಮದೇವಾ"[೨]

ಬಡತನವೆಂಬ ಮಂತ್ರವಾದಿಯಿಂದ ಮಾತ್ರ ಸಿರಿವಂತರ ದುರಹಂಕಾರ ಅಳಿಯಲು ಸಾಧ್ಯ. ಎಷ್ಟೋ ಜನರು ಹಣವಿರುವ ಕಾರಣಕ್ಕೆ ಮಾನವೀಯತೆಯನ್ನೇ ಕಳೆದುಕೊಂಡವರಂತೆ ವರ್ತಿಸುತ್ತಾರೆ. ಬಸವಣ್ಣ ತಾವು ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಪದವಿಯಲ್ಲಿದ್ದರೂ ಅವರದೆಂದಿಗೂ ಮುಗಿದ ಕೈ, ಬಾಗಿದ ತಲೆ, ವಿನಯಶೀಲತೆ ಸದ್ಗುಣ, ಕರುಣೆ ಇಂದು ಮನುಷ್ಯರಲ್ಲಿ ಕಾಣದಾಗಿದೆ "ಎನಗಿಂತ ಕಿರಿಯರಿಲ್ಲ; ಶಿವಶರಣರಿಗಿಂತ ಹಿರಿಯರಿಲ್ಲ" ಎಂಬ ಅವರ ಮಾತು ಅವರ ಸಜ್ಜನಶೀಲತೆಗೆ ಹಿಡಿದ ಕೈಗನ್ನಡಿ.

"ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ?
ತನಗಾದ ಆಗೇನು? ಅವರಿಗಾದ ಚೇಗೇನು?

---

೧. ಶಿಶವಸಂ., ಸಂ. ಡಾ. ವೀರಣ್ಣ ರಾಜೂರ, ಪು. ೭೪, ವ. ೨೪೯
೨. ಬ.ವ.ಸಂ. ಸಂ: ಡಾ|| ಎಂ.ಎಂ.ಕಲಬುರ್ಗಿ, ಪು. ૩૪, ವ. ೧૩೨

ತನುವಿನ ಕೋಪ ತನ್ನ ಹಿರಿತನದ ಕೇಡು
ಮನದ ಕೋಪ ತನ್ನ ಅರಿವಿನ ಕೇಡು
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲಸಂಗಮದೇವಾ"[೧]

ದಿನಾ ಬೆಳಿಗ್ಗೆ ಪತ್ರಿಕೆ, ಟಿ.ವಿ.ಯಲ್ಲಿ ಕೊಲೆ, ಸುಲಿಗೆ ಅತ್ಯಾಚಾರದಂಥ ಹೇಯ ಕೃತ್ಯಗಳನ್ನು ಕಾಣುತ್ತಿರುತ್ತೇವೆ. ಇಲ್ಲೆಲ್ಲಾ ದ್ವೇಷ, ಅಸೂಯೆಗಳು ಮನೆಮಾಡಿ ಒಬ್ಬರು ಮತ್ತೊಬ್ಬರನ್ನು ಕೊಲ್ಲುವ ಹಂತಕ್ಕೆ ಮನುಷ್ಯ ಬಂದಿದ್ದಾನೆ. ಶತ್ರುಗಳನ್ನು ಕ್ಷಮಿಸಿ ಮರೆಯದಿದ್ದರೆ ನಮ್ಮ ಮನಸ್ಸಿನಲ್ಲಿ ಅವರಿಗೊಂದು ಖಾಯಂ ಸ್ಥಳಕೊಟ್ಟಂತೆ. ತನಗೆ ಮುನಿಯುವವರಿಗೆ ತಾನೇಕೆ ಮುನಿಯಬೇಕು? ಇದರಿಂದ ಯಾರಿಗೆ ತಾನೇ ಲಾಭ? ಹೊಡೆದಾಡಿಕೊಂಡರೆ ತಮ್ಮ ದೊಡ್ಡಸ್ಥಿಕೆ, ಹಿರಿತನ ಹಾಳು. ಈ ದ್ವೇಷ ಮೊದಲು ನಮ್ಮ ಅಂತರಂಗದ ಮನೆಯನ್ನು ಸುಡುತ್ತದೆಯೇ ಹೊರತು ನೆರೆಮನೆಯನ್ನಲ್ಲ ಎಂದು ಎಚ್ಚರಿಸಿದ್ದಾರೆ. ಭಯೋತ್ಪಾದನೆಯಂಥ ಕೃತ್ಯಗಳಲ್ಲಿ ತೊಡಗಿ ಸಾವಿರಾರು ಮುಗ್ಧ ಜನರ ಹತ್ಯೆ ಮಾಡುವವರು ತಾವಾದರೂ ಸಾವಿರ ವರ್ಷವಿರುತ್ತಾರೆಯೇ! ಇದೊಂದನ್ನು ಅರಿತುಕೊಂಡರೇ ಸಮಾಜ ಸುಭಿಕ್ಷೆಯಿಂದಿರಬಹುದು.

"ಏನಿಬಂದಿರಿ ಹದುಳವಿದ್ದಿರೆ ಎಂದಡೆ
ನಿಮ್ಮೈಸಿರಿ ಹಾರಿ ಹೋಹುದೆ?
ಕುಳ್ಳಿರೆಂದಡೆ ನೆಲ ಕುಳಿಹೋಹುದೆ?
ಒಡನೆ ನುಡಿದಡೆ ಸಿರಿಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ
ಮೂಗ ಕೊಯ್ವುದ ಮಾಬನೆ ಕೂಡಲಸಂಗಮ ದೇವಯ್ಯಾ"[೨]

ಮನುಷ್ಯನಲ್ಲಿ ಕಿಂಚಿತ್ತಾದರೂ ಮಾನವೀಯತೆ, ಅಂತಃಕರಣಬೇಕು. ಇಲ್ಲದಿದ್ದರೆ ಪ್ರಾಣಿಗಿಂತಲೂ ಕೀಳಾಗುತ್ತಾನೆ. ಮನೆಗೆ ಬಂದವರ ಕ್ಷೇಮ, ಕುಶಲತೆ ವಿಚಾರಿಸಿದರೆ ನಿಮ್ಮ ಐಸಿರಿ ಏನಾದರೂ ಹೋಗುತ್ತದೆಯೇ? ಕುಳಿತುಕೊಳ್ಳಿ ಎಂದರೆ ನೆಲ ಕುಳಿಬೀಳುತ್ತದೆಯೇ? ಕಂಡ ಕೂಡಲೆ ಮಾತನಾಡಿಸಿದರೆ ಸಿರಿಹೊಟ್ಟೆ ಹೊಡೆದುಹೋದೀತೇ? ಅವರಿಗೆ ಏನನ್ನು ಕೊಡುವುದೂ ಇಲ್ಲ. ಕೊನೆಯ ಪಕ್ಷ ಒಳ್ಳೆಯ ಗುಣವೂ ಇಲ್ಲದಿದ್ದರೆ ಆ ಸಿರಿಯ ಗರವನ್ನು

೧. ಬ.ವ.ಸಂ. ಸಂ: ಡಾ॥ ಎಂ.ಎಂ.ಕಲಬುರ್ಗಿ, ಪು. ೬೨, ವ. ೨೪೮
೨. ಅದೇ ಪುಸ್ತಕ, ಪು. ೬೦, ವ. ೨೪೧

ಸಂಗಯ್ಯ ಮುರಿಯುವುದಾಗಿ ಎಚ್ಚರಿಸಿದ್ದಾರೆ. ಹೀಗೆ ಸಮಾಜದ ಪ್ರತಿಯೊಂದು ಘಟ್ಟದಲ್ಲಿಯೂ ಶರಣರ ನಡೆ, ನುಡಿಗಳು ಆದರ್ಶಪಾತ್ರವಾಗಿವೆ. ಸಮಾಜದ ಜನತೆಗೆ ತಿದ್ದಿಬುದ್ಧಿ ಹೇಳಿ ಅವರನ್ನು ಆಧ್ಯಾತ್ಮಿಕ ಔನ್ನತ್ಯಕ್ಕೆ ಕೊಂಡೊಯ್ದು ಅವರಲ್ಲಿದ್ದ ಸೋಮಾರಿತನ ಹೋಗಲಾಡಿಸಿ ಪ್ರತಿಯೊಬ್ಬರೂ ಕಾಯಕ ಕೈಗೊಳ್ಳಬೇಕೆಂಬ ಸಂದೇಶ ನೀಡಿರುತ್ತಾರೆ.

**ರಾಜಕೀಯ ಸನ್ನಿವೇಶ**

೧೨ನೇ ಶತಮಾನವು ಕಳಚೂರಿಗಳ ಪ್ರಬುದ್ಧಕಾಲ. ಸಾಮಂತನಾಗಿದ್ದ ಬಿಜ್ಜಳ ಸಮಯದ ಸದುಪಯೋಗದಿಂದ ರಾಜನಾದ. ಈತನಿಗೆ ರಾಜಕೀಯ ಅಸ್ಥಿರತೆಯೇ ಸಮಸ್ಯೆಯಾಗಿತ್ತು. ತನ್ನ ಸ್ಥಾನ ಉಳಿಸಿಕೊಳ್ಳಲು ಸದಾ ಎಚ್ಚರಿಕೆಯಿಂದಿರಬೇಕಿತ್ತು. ಅದಕ್ಕಾಗಿ ಸಮಾಜದಲ್ಲಿ ಎಲ್ಲಾ ವರ್ಗದವರ ಬೆಂಬಲವೂ ಬೇಕಿದ್ದಿತು. ಪುರೋಹಿತಶಾಹಿಗಳು ಮತ್ತು ಪ್ರಭುತ್ವ ಎರಡೂ ಸೇರಿ ಕೆಳಜಾತಿಯ ಜನರ ಮೇಲೆ ತಮ್ಮ ಕಪಿಬಿಗಿಮುಷ್ಟಿಧೋರಣೆ ತಳೆದಿದ್ದರು. ದೇವಾಲಯದ ಪ್ರವೇಶ ನಿರ್ಬಂಧಿಸಿದ್ದರು. ವೇದಾಗಮನ ಕಿವಿ ಮೇಲೆ ಬಿದ್ದರೆ ಕಾದ ಕಬ್ಬಿಣದ ಸೀಸೆಯನ್ನು ಕಿವಿಗೆ ಸುರಿಯುತ್ತಿದ್ದರು. ಅಪಾರ ಪ್ರಮಾಣದ ತೆರಿಗೆ ವಿಧಿಸಬೇಕಿತ್ತು. ರಾಜನ ಭಂಡಾರ ಉಳ್ಳವರ ಸ್ವತ್ತಾಗಿತ್ತು. ದೇವಾಲಯಗಳ ನಿರ್ಮಾಣಕ್ಕೆ ಬಳಕೆಯಾಗಿ ಪೋಲಾಗುತ್ತಿತ್ತು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಬಸವಣ್ಣ ರಾಜ್ಯದ ಕರಣಿಕ ವೃತ್ತಿಯಿಂದ ಹಂತಹಂತವಾಗಿ ಮೇಲೇಳುತ್ತಾ ಪ್ರಧಾನಮಂತ್ರಿಯಾದರೂ ದೇವಾಲಯಗಳ ನಿರ್ಮಾಣಕ್ಕೆ ತಡೆತಂದರು. ಭಂಡಾರದ ದುರುಪಯೋಗ ತಡೆಗಟ್ಟಿದರು. ದೇಹವೇ ದೇವಾಲಯ ಎಂದು ತೋರ್ಪಡಿಸಿ, ಕೆಳವರ್ಗದವರ ಉದ್ಧಾರಕ್ಕೆ ಪಣತೊಟ್ಟಿ ನಿಂತರು. ಇದು ಪುರೋಹಿತಶಾಹಿಗಳಿಗೆ ನುಂಗಲಾರದ ತುತ್ತಾಯಿತು. ಪರಿಣಾಮ ಪ್ರಭುಗೆ ದೂರಿತ್ತರು.

"ಪ್ರಭುತ್ವ ಹಾಗೂ ಪುರೋಹಿತಶಾಹಿಗಳ ಮನಾಪಲಿಯನ್ನು ವಚನಸಂಸ್ಕೃತಿ ಮುರಿಯಲು ಪ್ರಯತ್ನಿಸಿತು. ಸಮಾಜದಲ್ಲಿ ವಿವಿಧ ವರ್ಗದ ಜನರು ಮಾತನಾಡತೊಡಗಿದ್ದೇ ವಚನ ಸಂಸ್ಕೃತಿಯ ರಾಜಕಾರಣದ ಬಹುಮುಖ್ಯ ಸಾಧನೆಯಾಗಿದೆ. ಅಧಿಕಾರವು ಶಿಷ್ಟದಿಂದ ಪರಿಶಿಷ್ಟದ ಕಡೆಗೆ ಕೇಂದ್ರದಿಂದ ಅಂಚಿನ ಕಡೆಗೆ, ಪುರುಷಶಾಹಿಯಿಂದ ಲಿಂಗಸಂಬಂಧಿ ಸಮಾನತೆಯ ಕಡೆಗೆ, ಏಕರೂಪಿ ಸಮಾನತೆಯಿಂದ ಬಹುರೂಪಿ ಸಮಾನತೆಯ ಕಡೆಗೆ, ಆಲಯದಿಂದ ಬಯಲಕಡೆಗೆ, ಹರಿಯುವಂತೆ, ಸರಿಯುವಂತೆ ಮಾಡುವಲ್ಲಿ ವಚನ ಸಂಸ್ಕೃತಿಯ ಕಾಣಿಕೆ ಅಪಾರವಾಗಿದೆ".[೧]

---

೧. ವಚನ ಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೧೫೨

ಬಸವಣ್ಣನವರ ವಚನಗಳಲ್ಲಿ 'ಭಂಡಾರ'ಕ್ಕೆ ಸಂಬಂಧಿಸಿದಂತೆ ಕೆಲವು ವಚನಗಳು ಸಿಗುವುದರಿಂದ ಹಣಕಾಸಿನ ಮಂತ್ರಿಯಾಗಿದ್ದ ಬಸವಣ್ಣನವರ ಮೇಲೆ ಪ್ರಭುಗೆ ಬಂದ ದೂರುಗಳಿಗೆ ಉತ್ತರದಂತಹ ವಚನವಿದು,

"ತನುವ ಬಂದಲೆವರಯ್ಯಾ ಎನ್ನ ಮನವ ಬಂದು ನೋಡುವರಯ್ಯ
ಎನ್ನ ಧನವ ಬಂದು ಸೂರೆಗೊಂಬರಯ್ಯ
ಜಂಗಮವನರತ ಕೂಡಲಸಂಗಮದೇವಾ
ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯಾ"[೧]

ಬಹುಶಃ ಬಸವಣ್ಣನವರ ಜಂಗಮ ದಾಸೋಹಕ್ಕೆ ಹರಿದುಬರುತ್ತಿದ್ದ ಹಣ ಭಂಡಾರದಿಂದಲೇ ಎಂದು ತಪ್ಪು ತಿಳಿದಿದ್ದ ಜನ ಬಿಜ್ಜಳನಲ್ಲಿ ದೂರಿತ್ತಾಗ ಭಂಡಾರಕ್ಕೆ ನಾನು ಶುದ್ಧನಾಗಿರುವುದಾಗಿ ನಿರ್ಭಯದಿಂದ ಹೇಳಿರುತ್ತಾರೆ.

"ಊರ ಮುಂದೆ ಹಾಲಹಳ್ಳಹರಿವುತ್ತಿರಲು
ಒರೆಯಾವಿನ ಬೆನ್ನಲಿ ಹರಿಯಲದೇಕಯ್ಯಾ?
ಲಜ್ಜೆಗೆಡಲೇಕೆ? ನಾಣುಗೆಡಲೇಕೆ?
ಕೂಡಲಸಂಗಮ ದೇವರುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ"[೨]

ಊರ ಮುಂದೆ ಹಾಲಿನ ಹಳ್ಳವೇ ಇರಬೇಕಾದರೆ ಒರತೆಯ ನೀರಿಗೆ ಆಸೆಪಡುತ್ತೇವೆಯೇ. ಜಂಗಮ ದಾಸೋಹಕ್ಕೆ ಸತ್ಯಶುದ್ಧ ಕಾಯಕದಿಂದ ಬಂದುದರಲ್ಲಿ ಒಂದು ಭಾಗವನ್ನು ಶರಣರು ನೀಡುತ್ತಿದ್ದುದರಿಂದ ಸಹಪಂಕ್ತಿಭೋಜನ ಏರ್ಪಡುತ್ತಿತ್ತು. ಇದು ಪುರೋಹಿತಶಾಹಿಗಳ ಕಣ್ಣುಕುಕ್ಕಿತ್ತು. ಕೆಳವರ್ಗದವರನ್ನು ಕೀಳಾಗಿ ಕಾಣುತ್ತಿದ್ದರು. ಅವರನ್ನು ಕುರಿತಂತೆ ಈ ವಚನ.

"ನಡೆದರಯ್ಯಾ ಒಡೆಯರು ತನು-ಮನ-ಧನದ ಮೇಲೆ
ನುಡಿದರಯ್ಯ ಒಂದು ನಿಮಿಷ ಬಾರದಿದ್ದಡೆ
ಜರಿವರಯ್ಯ ಒಡೆಯರು ಮನಬಂದ ಪರಿಯಲಿ
ಶಿವಶಿವಾ! ಅಣಿವರಯ್ಯ ಮಂಡೆಯನೂರಿ
ಪ್ರಾಣದ ಒಡೆಯರಯ್ಯ
ಕೂಡಲ ಸಂಗಮದೇವಾ, ನಿಮ್ಮ ಶರಣರು"[೩]

---

೧. ಬ.ವ.ಸಂ. ಸಂ: ಡಾ॥ ಎಂ.ಎಂ.ಕಲಬುರ್ಗಿ, ಪು. ೧೮೧, ವ. ೭೨೨
೨. ಅದೇ ಪುಸ್ತಕ, ಪು. ೧೮೯, ವ. ೭೫೫
೩. ಅದೇ ಪುಸ್ತಕ

ಅಂದಿನ ರಾಜ ಪ್ರಭುತ್ವದಲ್ಲಿ ಮೇಲ್ವರ್ಗದ ಜನಗಳು ರಾಜನ ಸುತ್ತಮುತ್ತ ಇದ್ದು ಪರಿವರ್ತಿತವಾಗುತ್ತಿದ್ದ ಸಮಾಜವನ್ನು ಕಂಡು ಹೊಟ್ಟೆ ಉರಿದುಕೊಳ್ಳುತ್ತಾ ರಾಜನಿಗೆ ಚಾಡಿ ಹೇಳಿ ರಾಜ ಬಸವಣ್ಣನವರ ಮೇಲೆ ಮುನಿಸುಪಡುವಂತೆ ಮಾಡಿ ಕಲ್ಯಾಣದ ಕ್ರಾಂತಿಗೆ ರಾಜಕೀಯ ಪಿತೂರಿಯೇ ಕಾರಣವಾಗುತ್ತದೆ.

# ಅಧ್ಯಾಯ – ೩

# ವಚನಸಾಹಿತ್ಯದ ಉಗಮ ಮತ್ತು ಉದ್ದೇಶ

ಕನ್ನಡ ಸಾಹಿತ್ಯದ ಮೇರುಪರ್ವತವಾದ ವಚನಸಾಹಿತ್ಯದ ಉಗಮ ಕುರಿತಂತೆ ಹಲವು ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. "ಮೊದಲಿಗೆ ಎಂ.ಆರ್.ಶ್ರೀನಿವಾಸಮೂರ್ತಿಗಳು ವಚನಕಾರರ ಮೇಲೆ ತಮಿಳಿನ ಶೈವಭಕ್ತ ಪ್ರವಾಹದಲ್ಲಿ ಬೆಳೆದುಬಂದ ಸ್ತೋತ್ರಗೀತೆಗಳು ಹಾಗೂ ತೆಲುಗಿನ ಆರಾಧ್ಯ ಸಂಪ್ರದಾಯಗಳು ಪ್ರಭಾವ ಬೀರಿರಬಹುದಾದರೂ ವಚನಸಾಹಿತ್ಯ ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಾರ್ಜಿತ ಸ್ವತ್ತು. ವಚನಕಾರರು ಸಂಸ್ಕೃತದ ಆಚಾರ್ಯರಲ್ಲ. ಅವರು ಅಚ್ಚಗನ್ನಡದ ಬೇಸಾಯಗಾರರು"[೧] ಎಂದರು.

ಡಿ.ಎಲ್.ನರಸಿಂಹಾಚಾರ್ಯರು "ಪ್ರಬುದ್ಧ ಕರ್ನಾಟಕ"ದಲ್ಲಿ "ಇತರ ದೇಶೀಯ ಪದ್ಯಪ್ರಭೇದಗಳಂತೆ ಬಹುಶಃ ವಚನಗಳೂ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದು ವೀರಶೈವದಿಂದ ಕನ್ನಡ ಸಾಹಿತ್ಯದಲ್ಲಿ ಉಂಟಾದ ವಿಪ್ಲವವು ದೇಶೀಯ ಛಂದೋರೂಪಗಳನ್ನು ಪುನರುಜ್ಜೀವನಗೊಳಿಸಿದ ಸಂದರ್ಭದಲ್ಲಿ ಬಸವಣ್ಣನವರ ಮತ್ತು ಅವರ ಅನುಯಾಯಿಗಳ ನೇತೃತ್ವದಲ್ಲಿ ಅದು ಅಗ್ರಸ್ಥಾನವನ್ನು ಪಡೆದಿರಬಹುದು"[೨] ಎನ್ನುತ್ತಾರೆ.

ಎಲ್.ಬಸವರಾಜುರವರು "ವಚನಗಳಿಗೆ ಸಂಸ್ಕೃತ ಸಾಹಿತ್ಯದ ಕೆಲವು ಸ್ತೋತ್ರ ರೀತಿಗಳು ಪ್ರೇರಣೆ ನೀಡಿರಬೇಕೆಂಬ ವಾದವನ್ನು ಮುಂದಿಟ್ಟರು. ಸ್ತೋತ್ರಗದ್ಯ ಪ್ರಕಾರಗಳು ಗಣನೀಯವಲ್ಲದ 'ಛಂದೋಗಂಧಿ'ಗಳು. ಪ್ರಾಚೀನ ಕನ್ನಡ ಸಾಹಿತ್ಯ ವಚನಕಾರರು ಬಾಹ್ಯರಚನೆಗೆ ಈ ಮಾದರಿಯನ್ನು ಅಳವಡಿಸಿಕೊಂಡು ಭಾವತೀವ್ರತೆಯನ್ನು ಭಾಷೆಯ ಸರಳತೆಯನ್ನು ಅಳವಡಿಸಿಕೊಂಡು ಭಾವಗೀತೆಯ ಮೆರುಗನ್ನೂ ಕೊಟ್ಟು ವಚನಗಳನ್ನು ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವೆನಿಸಿದರು ಎಂದಿದ್ದಾರೆ"[೩] ಮತ್ತೊಬ್ಬ ವಿದ್ವಾಂಸರಾದ ಆರ್.ಆರ್.ದಿವಾಕರರು ತಮ್ಮ 'ವಚನಶಾಸ್ತ್ರ ರಹಸ್ಯ'ದಲ್ಲಿ "ತನುಮನಧನಗಳನ್ನು ಪ್ರಾಣಭಾವಗಳನ್ನು ಪರಮಾತ್ಮನಿಗರ್ಪಿಸಿದ ಶರಣರು ಆತ್ಮಾನುಭಾವಕ್ಕಾಗಿ ಆತುರರಾದ

---

೧. ವಚನ ಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೧

೨. ವಚನಸಾಹಿತ್ಯ ಮತ್ತು ದಾಸಸಾಹಿತ್ಯಗಳ ಸಮೀಕ್ಷೆ, ಡಾ॥ ಎನ್.ಎನ್.ಚಿಕ್ಕಮಾದು, ಪು. ೧೨.

೩. ವಚನಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೩

ಸಾಧಕರು. ಸಾಕ್ಷಾತ್ಕಾರವೇ ಸರ್ವಸ್ವವೆಂದು ಜೀವಭಾವದಿಂದ ನಂಬಿದವರು. ಈ ತಮ್ಮ ಸ್ವಭಾವ, ಸ್ವಧರ್ಮಗಳಿಗನುಸಾರವಾಗಿ ನಡೆಯುತ್ತಿರುವಾಗ ಅವರು ಸ್ಫೂರ್ತಿಯಿಂದ ನುಡಿದುದೇ ವಚನವೆನಿಸಿದರು"[೧] ಎಂದಿದ್ದಾರೆ.

ತೀ.ನಂ.ಶ್ರೀಕಂಠಯ್ಯನವರು 'ಕಾವ್ಯಸಮೀಕ್ಷೆ'ಯಲ್ಲಿ "ಅನೇಕ ವಚನಗಳಲ್ಲಿ ಒಂದು ಬಗೆಯ ಲಯಬದ್ಧತೆಯೇನೋ ಸ್ಫುಟವಾಗಿ ಗೋಚರವಾಗುತ್ತದೆ. ಇವುಗಳ ಧಾಟಿ ಪದ್ಯದಷ್ಟು ಬಿಗಿಯಲ್ಲ, ಗದ್ಯದಷ್ಟು ಸಡಿಲವೂ ಅಲ್ಲ. ಕೆಲವು ವಚನಗಳಂತೂ ಮೊದಲಿಗೆ ಸುಲಕ್ಷಣವಾದ ಹಾಡುಗಳಾಗಿದ್ದಂತೆಯೇ ತೋರುತ್ತದೆ"[೨] ಎಂದಿದ್ದಾರೆ.

ಎಂ.ಚಿದಾನಂದಮೂರ್ತಿಗಳು "ಕನ್ನಡದಲ್ಲಿಯೇ ವಚನ ಸಾಹಿತ್ಯದ ಮೂಲವಿದೆ ಎಂದರು. ಅಲ್ಲದೆ ಸಾಹಿತ್ಯ ಸೃಷ್ಟಿಯ ಉದ್ದೇಶದಿಂದ ಹೊರಡುವವರು ಹೊಸತನಕ್ಕಾಗಿ ಬೇರೆ ಭಾಷೆಗಳ ಕಾವ್ಯಮಾದರಿಗಳಿಂದ ಸ್ಫೂರ್ತಿ ಪಡೆಯಬಹುದು. ಆದರೆ ವಚನಗಳು ಹುಟ್ಟಿದುದು ಧರ್ಮಪ್ರಸಾರದ ಉದ್ದೇಶದಿಂದ ಎಂಬುದನ್ನು ಒತ್ತಿಹೇಳುವ ಅವರು ಜನರಿಗೆ ಪರಿಚಿತವಾಗಿದ್ದ ಸರಳ ಭಾಷೆಯನ್ನು ಬಳಸಿಕೊಂಡಂತೆ ಅವರಿಗೆ ಪರಿಚಿತವಾದ ಹಾಗೂ ಜೀವಂತವಾಗಿದ್ದ ರೀತಿಯನ್ನು ಬಳಸಿಕೊಂಡರು. ಹಾಗಾಗಿ ವಚನ ಸಾಹಿತ್ಯದ ಮೂಲವನ್ನು ಕನ್ನಡದಲ್ಲಿಯೇ ಹುಡುಕಬೇಕೆಂದು ಭಾವಿಸಿದರು".[೩]

ರಂ.ಶ್ರೀ.ಮುಗಳಿಯವರು "ಆಧ್ಯಾತ್ಮಿಕ ಸಾಧಕರು ಮತ್ತು ಅನುಭವಿಗಳು ಅನುಭವ ಮಂಟಪದಲ್ಲಿ ಸೇರಿ ಆತ್ಮವಿಕಾಸಕ್ಕಾಗಿ ಮುಕ್ತಮನದಿಂದ ಭಾವಗೀತಾತ್ಮಕರೂಪ, ಲಯ ಮತ್ತು ಶೈಲಿಗಳಲ್ಲಿ ಸಂಭಾಷಣೆಗಳನ್ನು ನಡೆಸಿ ವಚನಸಾಹಿತ್ಯ ನಿರ್ಮಾಣ ಮಾಡಿದ್ದು ಕನ್ನಡ ನಾಡಿನಲ್ಲಿಯೆ ಎಂದು ಹೇಳಿದರೆ ಹುಸಿ ಹೆಮ್ಮೆಯ ಮಾತಲ್ಲ"[೪] ಎಂದಿದ್ದಾರೆ.

ವಚನಗಳ ಉಗಮವನ್ನು ಕುರಿತು ಎಚ್.ದೇವಿರಪ್ಪನವರು "ಬಹುಪ್ರಾಚೀನ ಕಾಲದಿಂದಲೂ ರಾಜಮಹಾರಾಜರುಗಳ ಬಿರುದಾವಳಿಗಳನ್ನು ವಂದಿಮಾಗಧರ ಹೊಗಳುವ ಸಂಪ್ರದಾಯವಿತ್ತು. ದೇವರೋ ಭೂತವೋ ಮೈದುಂಬಿದವರು ಅಪ್ಪಣೆ ಕೊಡಿಸುವ ಪದ್ಧತಿ ಇಂದಿಗೂ ಉಂಟು. ಕಾರಣಿಕಗಳನ್ನು ವೀರಭದ್ರನ ವಡಮುಗಳನ್ನು ಹೇಳುವುದನ್ನೂ ನಾವು

---

೧. ವಚನಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೩

೨. ವಚನಸಾಹಿತ್ಯ ಮತ್ತು ದಾಸಸಾಹಿತ್ಯಗಳ ಸಮೀಕ್ಷೆ, ಡಾ॥ ಎನ್.ಎನ್.ಚಿಕ್ಕಮಾದು, ಪು. ೧೨.

೩. ವಚನಸಾಹಿತ್ಯ, ಡಾ॥ ಶಿವಾನಂದ ಕೆಳಗಿನಮನಿ, ಪು. ೩

೪. ಅದೇ ಪುಸ್ತಕ

ನೋಡಿದ್ದೇವೆ. ಈ ಬಿರುದಾವಳಿ, ಅಪ್ಪಣೆ, ಕಾರಣಿಕ ಮತ್ತು ಅಂಗವೀರರ 'ವಡಪು'ಗಳ ಮಾತಿನಶೈಲಿ ಒಂದು ಬಗೆಯಲ್ಲಿ ಛಂದೋಲಯ ಬದ್ಧವಾಗಿರುತ್ತದೆ. ಅರ್ಥಕ್ಕನುಗುಣವಾಗಿ ಅವುಗಳ ಈ ಶೈಲಿಯು ಜನತೆಯ ಮನವನ್ನು ಬಹುಸುಲಭವಾಗಿ ಒಲಿಸಿ-ಕೊಳ್ಳುವುದೆಂಬುದನ್ನು ಕಂಡುಕೊಂಡ ವಚನಕಾರರು ಇದನ್ನೇ ಮತ್ತಷ್ಟು ಪರಿಷ್ಕರಿಸಿಕೊಂಡು ವಚನಗಳನ್ನು ನುಡಿಯಲು ಆರಂಭಿಸಿದರೆಂದು ತೋರುವುದು"[೧] ಎಂದಿದ್ದಾರೆ.

"ವೇದಗಳೆಂಬವು ಬ್ರಹ್ಮನ ಬೂಟಾಟ
ಶಾಸ್ತ್ರಂಗಳೆಂಬವು ಸರಸ್ವತಿಯ ಗೊಡ್ಡಾಟ
ಆಗಮಂಗಳೆಂಬವು ಋಷಿಯ ಮರುಳಾಟ
ಪುರಾಣಗಳೆಂಬುವು ಪೂರ್ವದವರ ಗೊಡ್ಡಾಟ
ಇಂತು ಇವನು ಅರಿದವರ ನೀತಿಗಳೆಂದು
ನಿಜದಲ್ಲಿ ನಿಂದಿಪ್ಪಾತನೆ ಗುಹೇಶ್ವರನಲ್ಲಿ ಅಚ್ಚಲಿಂಗೈಕ್ಯನು"[೨]

ಹೀಗೆ ವೇದ, ಶಾಸ್ತ್ರ, ಪುರಾಣ, ಆಗಮಗಳನ್ನು ತಿರಸ್ಕರಿಸಿದರೆಂದರೆ ಅವುಗಳನ್ನೆಲ್ಲಾ ಓದಿ ಅರ್ಥೈಸಿ, ಪ್ರಾಮಾಣೀಕರಿಸಿ ಅಲ್ಲೆಲ್ಲಿಯೂ ದೇವರಿಲ್ಲ ಎಂಬುದನ್ನು ಅರಿತು, ತನ್ನ ತಾನರಿತರೆ ತಾನೇ ದೈವ ಎಂಬುದನ್ನು ಮನಗಂಡರು. ಅಂದಿನ ಪುರೋಹಿತಶಾಹಿ ದೈವಭಾಷೆ ಸಂಸ್ಕೃತವನ್ನು ತ್ಯಜಿಸಿ, ಜನಸಾಮಾನ್ಯರಿಗೂ ಅರ್ಥವಾಗುವ ಅವರಾಡುವ ಭಾಷೆಯಲ್ಲಿಯೇ ವಚನಗಳ ರಚನೆ ಮಾಡಿದರು. ಚಂಪೂಶೈಲಿಯ ಜೈನಸಾಹಿತ್ಯ ಅಹಿಂಸೆಯನ್ನು ಬೋಧಿಸಿದರೂ ಹಿಂಸೆಯ ಪಾಲಕರಾದ ರಾಜರ ಆಶ್ರಯವನ್ನೇ ಅನುಸರಿಸಿತ್ತು. ಈ ಎಲ್ಲಾ ಪರಿಸ್ಥಿತಿಯನ್ನು ಮನಗೊಂಡ ವಚನಕಾರರು ಹೇಳುವುದನ್ನು ಆದಷ್ಟು ಸರಳಗೊಳಿಸಿ, ಅಚ್ಚಗನ್ನಡದಲ್ಲೇ ತಮ್ಮ ಅನುಭಾವವನ್ನು ಅಭಿವ್ಯಕ್ತಗೊಳಿಸಿದುದು ಸುವರ್ಣಾಕ್ಷರವೆನಿಸಿದವು. ಜನಸಾಮಾನ್ಯರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯ ಲಭಿಸಿತು. ಬಸವಣ್ಣನವರಿಗಿಂತಲೂ ಮೊದಲೇ ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯನಂಥ ಹಿರಿಯ ಸಮಕಾಲೀನರು ಸರಳವಾದ ವಚನಗಳ ರಚನೆಯಲ್ಲಿ ತಮ್ಮ ಅನುಭಾವವನ್ನು ಅಭಿವ್ಯಕ್ತಗೊಳಿಸಿದುದು ನಂತರ ಬಂದ ವಚನಕಾರರಿಗೆ ದಾರಿಯಾಯಿತು. ಅದನ್ನೇ ಅನುಸರಿಸಿ ತಮ್ಮ ಇಷ್ಟವಾದ ಅಂಕಿತವನ್ನಿಟ್ಟುಕೊಂಡು ವಚನಗಳ ರಚನೆಯಲ್ಲಿ ತೊಡಗಿ ಸಾವಿರಾರು ವಚನಗಳ ರಚನೆಗೈದಿದ್ದಾರೆ. ವಚನಗಳು 'ಕನ್ನಡದ ಉಪನಿಷತ್ತು'ಗಳೆಂದು ಪ್ರಸಿದ್ಧಿ ಪಡೆದಿವೆ.

---

೧. ವಚನಸಾಹಿತ್ಯ ಮತ್ತು ದಾಸಸಾಹಿತ್ಯಗಳ ಸಮೀಕ್ಷೆ, ಡಾ॥ ಎನ್.ಎನ್.ಚಿಕ್ಕಮಾದು, ಪು. ೧೫.

೨. ಅ.ಪ್ರವ.ಸಂ., ಸಂ: ಬಿ.ವ್ಹಿ.ಮಲ್ಲಾಪುರ

# ಅಧ್ಯಾಯ – ೪

# ವಚನ ಯುಗದಲ್ಲಿ ಮಹಿಳೆಯರ ಸ್ಥಾನಮಾನ

ವೇದಗಳ ಕಾಲದಲ್ಲಿ ಮಹಿಳೆಯರಿಗೆ ಪುರುಷರಷ್ಟೇ ಪ್ರಾಧಾನ್ಯತೆ ನೀಡಲಾಗಿತ್ತು. ಆಕೆ ಯಜ್ಞಯಾಗಾದಿಯಲ್ಲಿ ಪುರುಷ ಸಮಾನಳಾಗಿ ಭಾಗಿಯಾಗುತ್ತಿದ್ದಳು. ಪುರುಷರಂತೆ ವೇದಾಧ್ಯಯನ ನಡೆಸುತ್ತಿದ್ದರು. ಶಾಂಡಲಿ, ಮೈತ್ರೇಯಿ, ಗಾರ್ಗಿ, ಬ್ರಾಹ್ಮಿ, ವೈಶಾಖಿಯಂತವರು ವೇದಾಧ್ಯಯನ ಪಾರಂಗತರಾಗಿದ್ದರು. ಮುಂದುವರಿದು ಸ್ತ್ರೀಸಾಮಾಜಿಕವಾಗಿ ಅಧೋಮುಖತೆಯೆಡೆಗೆ ಸಾಗುತ್ತಾ ಬಂದಳು. ಮನುಸ್ಮೃತಿಯಲ್ಲಿ

"ಪಿತಾ ರಕ್ಷತಿ ಕೌಮಾರೇ, ಭಾರ್ತಾರಕ್ಷತಿಯೌವನೇ।
ರಕ್ಷಂತಿ ಸ್ಥಾವಿರೇ ಪುತ್ರಾ, ನಸ್ತ್ರೀಸ್ವಾತಂತ್ರ್ಯಮರ್ಹತಿ॥"

ಎಂದು ಹುಟ್ಟಿನಿಂದ ಸಾಯುವವರೆಗೂ ಪರಾವಲಂಬಿಯಾಗಿಯೇ ಜೀವನ ಕಳೆಯಬೇಕು. ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂದನು. ಅಂದು ಒದಗಿದ ದುಃಸ್ಥಿತಿಯಿಂದ ಸ್ತ್ರೀ ಎಚ್ಚೆತ್ತುಕೊಳ್ಳಲು ಬಸವಾದಿ ಶರಣರ ಯುಗದವರೆಗೂ ಕಾಯಬೇಕಾಯಿತು.

ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀಗೆ ಅಭಿವ್ಯಕ್ತಿ ಸ್ವಾತಂತ್ರ್ಯ ನಿರಾಕರಿಸಿದ ಸಂದರ್ಭದಲ್ಲಿ ವಚನಕಾರರು ಅನುಭವಮಂಟಪದಲ್ಲಿ ಸ್ತ್ರೀಯರಿಗೆ ಸಮಾನ ಸ್ಥಾನಮಾನ ನೀಡಿ ಸ್ತ್ರೀವಾದಿಗಳಾಗಿ ಮೇಲುಪಂಕ್ತಿ ಹಾಕಿಕೊಟ್ಟಿದ್ದಾರೆ. ಹೀಗಾಗಿ ಅಕ್ಕಮಹಾದೇವಿ, ಆಯ್ದಕ್ಕಿ ಲಕ್ಕಮ್ಮ, ಸತ್ಯಕ್ಕ ಅಮುಗೆಯ ರಾಯಮ್ಮ ಇನ್ನೂ ಮುಂತಾದವರು ವಚನ ಚಳುವಳಿಯಲ್ಲಿ ಭಾಗವಹಿಸಲು ಸಾಧ್ಯವಾಯಿತು.

ಮಹಿಳೆಯರ ಸ್ಥಾನಮಾನಗಳು ಉನ್ನತ್ತೀಕರಣಗೊಂಡಿದ್ದು ವಚನ ಕಾಲಘಟ್ಟದಲ್ಲಿ. ಮಹಿಳೆಯರು ಸಂಸಾರವನ್ನು ತ್ಯಜಿಸದೆ ಅದರಲ್ಲಿದ್ದುಕೊಂಡೇ ಮುಕ್ತಿಯ ಪಥದೆಡೆ ಚಲಿಸಿದವರು. ಆ ಸಂಸಾರದಲ್ಲಿ ಪುರುಷರಷ್ಟೇ ಮಹಿಳೆಯರೂ ಸಮಾನ ಸ್ಥಾನಮಾನ ಪಡೆದವರಾಗಿದ್ದಾರೆ. ವಚನಕಾರರ ದೃಷ್ಟಿಯಲ್ಲಿ ಸ್ತ್ರೀ–ಪುರುಷರು ಭಿನ್ನರಲ್ಲ. ಆತ್ಮ ಮುಖ್ಯವೇ ಹೊರತು ದೇಹದ ರಚನೆಯಲ್ಲ. "ಶರಣಸತಿ – ಲಿಂಗಪತಿ" ಎಂಬ ಅದ್ಭುತ ಪರಿಕಲ್ಪನೆಗೆ ನಾಂದಿ ಹಾಡಿದರು. ಶರಣ ಸ್ತ್ರೀ, ಪುರುಷ ಯಾರೇ ಆಗಿರಲಿ ಅವರಿಬ್ಬರಿಗೂ ಲಿಂಗವೇ ಪತಿ ಎಂದರು. ಪುರುಷರಷ್ಟೇ ಸ್ತ್ರೀಗೂ ಕಾಯಕ ಸಮಾನತೆಯನ್ನು ಒದಗಿಸಿಕೊಟ್ಟರು.

"ಶಿವಶರಣರು ಹೆಣ್ಣಿಗೆ ಸಂಸಾರದಲ್ಲಿದ್ದುಕೊಂಡೇ, ಕಾಯಕವನ್ನು ಅನುಸರಿಸುತ್ತಲೇ ಆಧ್ಯಾತ್ಮಿಕ ಸಾಧನೆಗೆ ತೊಡಗಿಕೊಳ್ಳುವ ಆಹ್ವಾನ ಅವಕಾಶಗಳನ್ನು ನೀಡಿದರು. ಆದ್ದರಿಂದಲೇ ಈ ಯುಗದಲ್ಲಿ ಬಂದ ಅನೇಕ ಹೆಣ್ಣುಗಳು ತಮ್ಮ ಪತಿಯೊಡನೆ, ದಂಪತಿ ಸಮೇತರಾಗಿ ಸಾಧನೆಯಲ್ಲಿ ತೊಡಗುತ್ತಾರೆ. ಹೆಣ್ಣು ಜೀವನದ ಮುಳ್ಳು, ಆಕೆ ಮಾಯೆ ಎಂಬ ಪಾರಂಪರಿಕ ನಂಬಿಕೆಗಳು ಬುಡಮೇಲಾದವು. ಬದಲಾಗಿ ಆಕೆ ಆಧ್ಯಾತ್ಮಿಕ ಸಾಧನಾ ಬದುಕಿನಲ್ಲಿ 'ಹೇಯ', 'ತ್ಯಾಜ್ಯ' ಎಂದು ಭಾವಿಸುವುದಿಲ್ಲ".[೧]

ಸ್ತ್ರೀಯರಿಗೂ ವಚನರಚನೆ, ಅನುಭಾವ, ಆಧ್ಯಾತ್ಮಿಕ, ಕಾಯಕ, ಇಷ್ಟಲಿಂಗಧಾರಣೆ, ದಾಸೋಹ ಎಲ್ಲದರಲ್ಲೂ ಸಮಾನತೆಯನ್ನು ನೀಡಿದುದರಿಂದಲೇ ೩೫ಕ್ಕೂ ಹೆಚ್ಚು ವಚನಕಾರ್ತಿಯರು ವಚನಯುಗದಲ್ಲಿ ಕಾಣುತ್ತಾರೆ. ಅಕ್ಕಮಹಾದೇವಿ, ಅಕ್ಕಮ್ಮ, ಅಮುಗೆರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ಕಾಳವ್ವ, ಮಸಣಮ್ಮ, ಕದಿರಕಾಯಕದ ಕಾಳವ್ವ, ಕದಿರರೆಮ್ಮವ್ವ, ಕನ್ನಡಿ ಕಾಯಕದ ರೇಮಮ್ಮ, ಕಾಟಕೂಟಯ್ಯಗಳ ಪುಣ್ಯಸ್ತ್ರೀ ರೇಚವ್ವ, ಕಾಲಕಣ್ಣಿಯ ಕಾಮಮ್ಮ, ಕೊಟ್ಟಣದ ಸೋಮಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಗಜೇಶಮಸಣಯ್ಯಗಳ ಪುಣ್ಯಸ್ತ್ರೀ, ಕೇತಲದೇವಿ, ಗೊಗ್ಗವ್ವೆ, ದುಗ್ಗಳೆ, ನಾಗಲಾಂಬಿಕೆ, ನೀಲಮ್ಮ, ಬೊಂತಾದೇವಿ, ಮುಕ್ತಾಯಕ್ಕ, ಮೋಳಿಗೆ ಮಹಾದೇವಿ, ಸತ್ಯಕ್ಕ, ಸೂಳೆಸಂಕವ್ವ ಮುಂತಾದ ಸ್ತ್ರೀಯರು ವಚನರಚನೆಯಲ್ಲಿ ತೊಡಗಿ ತಮ್ಮ ಅನುಭಾವದ ಸಂಪತ್ತನ್ನು ನಾಡಿಗೆ ಉಣಲಿತ್ತಿದ್ದಾರೆ.

"ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ"[೨]

ಹೆಣ್ಣು ಮಾಯೆ, ಕಾಮವಿಕಾರವ ಮಾಡುವವಳು, ಗಂಡಿನ ಸರಿಸಮಾನಳಲ್ಲ ಎಂಬ ಭಾವ ತೊಲಗಿ ಹೆಣ್ಣು, ಹೊನ್ನು, ಮಣ್ಣು ಮಾಯೆಯಲ್ಲ. ಮನಸ್ಸಿನಲ್ಲಿ ನೆಲೆಸಿರುವ ಆಸೆಯೇ ಮಾಯೆ ಎಂದು ಅಲ್ಲಮಪ್ರಭು ಹೆಣ್ಣಿನ ಕಳಂಕವನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಪರಸ್ತ್ರೀಯನ್ನು ಕಣ್ಣೆತ್ತೂ ನೋಡಬಾರದೆಂಬುದು ವಚನಕಾರರ ನಿಲುವಾಗಿತ್ತು.

---

೧. ವ.ಸಾ, ಡಾ॥ ಶಿವಾನಂದ ಕೆಳಗಿನಮನಿ, ಪು. ೩೮
೨. ಅ.ಪ್ರ.ವ.ಸಂ. ಡಾ॥ ಬಿ.ವ್ಹಿ.ಮಲ್ಲಾಪುರ, ಪು. ೨೫, ವ. ೭೨

"ನೋಡಲಾಗದು ನುಡಿಸಲಾಗದು ಪರಸ್ತ್ರೀಯ, ಬೇಡ ಕಾಣಿರೋ
ತಗರ ಬೆನ್ನಲಿ ಹರಿವ ಸೊಣಗನಂತೆ, ಬೇಡ ಕಾಣಿರೋ
ಒಂದಾಸೆಗೆ ಸಾಸಿರ ವರುಷ ನರಕದಲದ್ದುವ
ಕೂಡಲಸಂಗಮದೇವ"[೧]

ಕೆಟ್ಟ ದೃಷ್ಟಿಯಿಂದ ಪರಸ್ತ್ರೀಯನ್ನು ಕಾಣಬಾರದು, ಮಾತನಾಡಿಸಲೂಬಾರದು. ಹಾಗೆ ಮಾಡಿದರೆ 'ತಗರ ಬೆನ್ನಲಿ ಹರಿವ ಸೊಣಗನಂತೆ' ನಾಯಿ ಟಗರಿನಿಂದ ಗುದ್ದಿಸಿಕೊಂಡು ನರಳಬೇಕಾದಂತಾಗುತ್ತದೆ. ಒಂದು ಆಸೆಗೆ ಹೋಗಿ ಸಾವಿರ ವರುಷ ನರಕ ಅನುಭವಿಸಬೇಕಾಗುತ್ತದೆಂದು ಎಚ್ಚರಿಕೆ ನೀಡಿರುತ್ತಾರೆ.

ನಡುವೆ ಸುಳಿವಾತ್ಮನೂ ಹೆಣ್ಣೂ ಅಲ್ಲ ಗಂಡೂ ಅಲ್ಲ ರಾಮನಾಥ" ಎಂದು ಸ್ತ್ರೀಪುರುಷ ಸಮಾನತೆಯನ್ನು ಸೂಚಿಸುತ್ತದೆ.

"ಸತಿಪತಿಗಳೊಂದಾದ ಭಕ್ತಿಹಿತವಾಗಿಪ್ಪುದು ಶಿವಂಗೆ
ಸತಿಪತಿಗಳೊಂದಾಗದವನ ಭಕ್ತಿ
ಅಮೃತದೊಳು ವಿಷಬೆರೆಸಿದಂತೆ ಕಾಣಾ ರಾಮನಾಥ"[೨]

ಆದರ್ಶ ದಾಂಪತ್ಯದ ಕಲ್ಪನೆ ಇಲ್ಲದೆ, ಸತಿಪತಿಗಳು ಒಟ್ಟಾಗಿ ಸೇರಿ ಮಾಡುವ ಭಕ್ತಿಯ ಆಚರಣೆ ಭಗವಂತನಿಗೆ ಪ್ರಿಯವಾದುದು. ಇಲ್ಲದಿದ್ದರೆ ಅಮೃತದ ವಿಷ ಬೆರೆಸಿದಂತೆ ಎನ್ನುವ ದಾಸಿಮಯ್ಯ ಸಂಸಾರ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾರೆ. ದುಗ್ಗಳೆಯಂಥ ಸಖ್ಯ ಹೆಂಡತಿಯೂ ದೊರೆತಿದುದು ದಾಸಿಮಯ್ಯರ ಸಾಂಸಾರಿಕ ಜೀವನ ಸಾಫಲ್ಯ ಕಂಡಿತು. ಇಂದು ಎಷ್ಟೋ ಜನರು ದಾಂಪತ್ಯ ವಿರಸಕಂಡು ವಿಚ್ಛೇದನದ ಹಂತಕ್ಕೆ ತಲುಪುತ್ತಿದ್ದಾರೆ. ಸಂಸಾರ ಸಾಕಪ್ಪ ಎನ್ನುವ ಮಟ್ಟಿಗೆ ರೋಸಿಹೋಗಿರುತ್ತಾರೆ. ಇಂಥವರು ಅಂಬಿಗಚೌಡಯ್ಯರ ವಚನದಿಂದ ಪಾಠ ಕಲಿಯಬೇಕು.

"ಹೊನ್ನ ಬಿಟ್ಟು ಲಿಂಗವನೊಲಿಸಬೇಕೆಂಬರು
ಹೊನ್ನಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?
ಹೆಣ್ಣು ಬಿಟ್ಟು ಲಿಂಗವನೊಲಿಸಬೇಕೆಂಬರು
ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?

---

೧. ಬ.ವ.ಸಂ. ಸಂ. ಡಾ॥ ಎಂ.ಎಂ.ಕಲಬುರ್ಗಿ, ಪು. ೧೬೧, ವ. ೬೪೨
೨. ಸಂ.ವ.ಸಂ. ಡಾ॥ ಎಸ್.ವಿದ್ಯಾಶಂಕರ, ಪು. ೨೬೩, ವ. ೮೬೧

ಮಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು
ಮಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ
ಅಂಗವ ಬಿಟ್ಟು ಲಿಂಗವನೊಲಿಸಬೇಕೆಂಬರು
ಅಂಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೇ?
ಇಂದ್ರಿಯಂಗಳ ಬಿಟ್ಟು ಲಿಂಗವನೊಲಿಸಬೇಕೆಂಬರು
ಇಂದ್ರಿಯಂಗಳಿಗೂ ಲಿಂಗಕ್ಕೂ ವಿರುದ್ಧವೇ?"[೧]

ಹೊನ್ನು, ಹೆಣ್ಣು, ಮಣ್ಣು, ಅಂಗಸುಖ, ಇಂದ್ರಿಯಗಳ ವಾಂಛೆ ಇವೆಲ್ಲವೂ ಲಿಂಗದರಿವಿಗೆ ಎಂದೂ ಅಡ್ಡಿಪಡಿಸಲಾರವು. ಸಂಸಾರದಲ್ಲದ್ದೇ ಭವಬಂಧನದಿಂದ ಮುಕ್ತಿಪಡೆದು ಪಾರಮಾರ್ಥಿಕದೆಡೆಗೆ ಚಲಿಸಬಹುದೆಂದು ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀಯ ನಿಲುವು.

"ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ,
ಸುರಗಿಯ ಮೊನೆಗಂಜೆ,
ಒಂದಕ್ಕಂಜುವೆ, ಒಂದಕ್ಕಳುಕುವೆ
ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ!
ಅಂಜುವೆನಯ್ಯಾ, ಕೂಡಲಸಂಗಮದೇವಾ"[೨]

ಬಸವಣ್ಣ ತಾವು ಹರಿಯುವ ಹಾವು, ಉರಿಯುವ ಬೆಂಕಿ, ಕತ್ತಿಯ ಮೊನೆಗೆ ಅಂಜುವುದಿಲ್ಲ. ಆದರೆ ಪರಸ್ತ್ರೀ, ಪರಧನಕ್ಕೆ ಮಾತ್ರ ಅಂಜುವುದಾಗಿ ಹೇಳಿದ್ದಾರೆ. ಇದಕ್ಕೆ ಅಂಜದ ರಾವಣನ ಗತಿಯೇನಾಯಿತೆಂದು ತಿಳಿದಿದ್ದೇವೆ. ಹಾಗಾಗಿ ಪರಸ್ತ್ರೀಯರಿಗೆ ತಾನಂಜುವುದಾಗಿ ಹೇಳಿರುತ್ತಾರೆ. ಶರಣರ ಆದರ್ಶಗಳನ್ನು ಅಳವಡಿಸಿಕೊಂಡರೆ ಸುಸ್ಥಿತಿ ಸಮಾಜ ನಿರ್ಮಾಣ ಸಾಧ್ಯ. ಸ್ತ್ರೀಯರನ್ನು ಗೌರವಿಸಬೇಕು; ಆದರಿಸಬೇಕು. ಆಗ ಮಾತ್ರ ಆರೋಗ್ಯವಂತ ಸಮಾಜ ನಿರ್ಮಾಣ ಸಾಧ್ಯ ಎಂಬುದು ಒಟ್ಟಾರೆ ವಚನಕಾರರ ಅರಿವು ಆಗಿದ್ದು, ಅಂತೆಯೇ ಲಿಂಗ ಅಸಮಾನತೆಗೆ ಒತ್ತು ನೀಡದೆ 'ನಡುವೆ ಸುಳಿವಾತ್ಮನೂ ಹೆಣ್ಣೂ ಅಲ್ಲ ಗಂಡು ಅಲ್ಲ' ಎಂದು ತೀರ್ಮಾನಕ್ಕೆ ಬಂದು ಸ್ತ್ರೀಯರಿಗೂ ಅನುಭವಮಂಟಪದಲ್ಲಿ ಸ್ಥಾನ ನೀಡಿದ್ದಾರೆ.

*****

---

೧. ಶಿಶವಸಂ. ಸಂ. ಡಾ॥ ವೀರಣ್ಣರಾಜೂರ, ಪು. ೨೪೪, ವ. ೭೭೧
೨. ಬ.ವ.ಸಂ. ಸಂ. ಡಾ॥ ಎಂ.ಎಂ.ಕಲಬುರ್ಗಿ, ಪು. ೧೦೮, ವ. ೪೪೭

# ಅಧ್ಯಾಯ – ೫

# ಅಮುಗರಾಯಮ್ಮಳ ಕಾಲ–ದೇಶ–ವಿಚಾರ

ವಚನಕಾರ್ತಿ ಅಮುಗೆರಾಯಮ್ಮಳನ್ನು ಕುರಿತಂತೆ ವಿದ್ವಾಂಸರಲ್ಲಿ ದ್ವಂದ್ವ ಮನೆಮಾಡಿದೆ. ಕಾರಣ ಈ ಹೆಸರಿನಲ್ಲಿ ಇಬ್ಬರು ರಾಯಮ್ಮನಿರುವುದು. ಒಬ್ಬರು ಅಮುಗಿದೇವಯ್ಯ ಪತ್ನಿ, ಮತ್ತೊಬ್ಬರು ರಾಯಸದ ಮಂಚಣ್ಣನ ಪತ್ನಿ. ಅಮುಗಿದೇವಯ್ಯನದು ಕಾಯಕ ನೇಯ್ಗೆಯಾದರೆ, ರಾಯಸದ ಮಂಚಣ್ಣನ ಕಾಯಕ ಪತ್ರ, ಓಲೆಗಳನ್ನು ತಲುಪಿಸುವ ಕೆಲಸ.

"ಶಿವಶರಣೆಯರ ವಚನಸಂಪುಟ" ಸಂಪಾದಕರಾದ ಡಾ. ವೀರಣ್ಣ ರಾಜೂರರು 'ಅಮುಗೆರಾಯಮ್ಮನ' ಹೆಸರಿನಲ್ಲಿ ೧೧೬ ವಚನಗಳನ್ನು, ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮನ ಹೆಸರಿನಲ್ಲಿ ಒಂದು ವಚನವನ್ನು ಸಂಗ್ರಹಿಸಿದ್ದಾರೆ. ಪ್ರಸ್ತಾವನೆಯಲ್ಲಿ "ಅಮುಗೆರಾಯಮ್ಮ ಅಮುಗ ದೇವಯ್ಯಗಳ ಪುಣ್ಯಸ್ತ್ರೀ. ಇದಕ್ಕೆ ಅಮುಗೆ ದೇವಯ್ಯಗಳ ಸಾಂಗತ್ಯದಲ್ಲಿ ಆಧಾರವಿದೆ" ಎಂದು ಹೇಳಿ ರಾಯಮ್ಮ ಇಬ್ಬರಲ್ಲಿ ಮೂವರೆಂದು ಹೇಳಿ (ರಾಯಸದ ಮಂಚಣ್ಣನ ಪತ್ನಿ ರಾಯಮ್ಮ, ಅಮುಗಿದೇವಯ್ಯಗಳ ಪುಣ್ಯಸ್ತ್ರೀ ಮತ್ತು ಅಮುಗೆರಾಯಮ್ಮ) ಅಮುಗೆರಾಯಮ್ಮನ ಹೆಸರಿನಲ್ಲಿ ೧೧೬ ವಚನವನ್ನು ಸಂಗ್ರಹಿಸಿರುತ್ತಾರೆ. "ಗರಡಿಯಲ್ಲಿ ಕೋಲಲ್ಲದೆ" ಎಂಬ ವಚನವನ್ನು ರಾಯಸದ ಮಂಚಣ್ಣನ ಪತ್ನಿ ರಾಯಮ್ಮ ಅಮುಗಿ ರಾಯಮ್ಮಳಿಂದಲೇ ಈ ವಚನ ತೆಗೆದುಕೊಂಡಿರಬೇಕೆಂದು ಊಹಿಸುತ್ತಾರೆ.

ಡಾ. ಆರ್.ಸಿ.ಹಿರೇಮಠರವರು ಸಂಪಾದಿಸಿದ "ಶಿವಶರಣೆಯರ ವಚನಗಳು" ಕೃತಿಯಲ್ಲಿ ರಾಯಸದ ಮಂಚಣ್ಣನ ಪತ್ನಿ ರಾಯಮ್ಮನ ವಚನ ಇಲ್ಲ. ಅವರು ಹೇಳಿರುವಂತೆ "ಒಂದು ವಚನವು ಒಂದು ಕಟ್ಟಿನಲ್ಲಿ ಒಂದು ಅಂಕಿತದಲ್ಲಿ ಬಂದರೆ ಅದೇ ವಚನ ಅದೇ ಆಕರದ ಇಲ್ಲವೇ ಬೇರೊಂದು ಆಕರದ ಇನ್ನೊಂದು ಕಟ್ಟಿನಲ್ಲಿ ಬೇರ ಅಂಕಿತದಲ್ಲಿ ದೊರೆಯುತ್ತದೆ. ಇನ್ನೂ ಕಠಿಣ ಸಮಸ್ಯೆ ಎಂದರೆ ಒಂದು ಅಂಕಿತದ ವಚನ ಬೇರೆ ಬೇರೆ ಕರ್ತೃತ್ವವನ್ನು ಹೊಂದಿರುತ್ತದೆ. ಉದಾಹರಣೆಗೆ "ಅಮುಗೇಶ್ವರಲಿಂಗ" ಎಂಬ ಅಂಕಿತವುಳ್ಳದೊಂದು ವಚನ. ಇದು ಸಕಲ ಪುರಾತನರ ವಚನಗಳಲ್ಲಿ ಬರುವ 'ಶೀಲಸಂಪಾದನೆಯ ವಚನಗಳು' ಸದರಿನಲ್ಲಿ ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀಯ ವಚನ ಎಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಇದೇ ವಚನ ಸಕಲ ಪುರಾತನರ ವಚನಗಳ

ಇನ್ನೊಂದು ಬಗೆಯ ಸಂಗ್ರಹದಲ್ಲಿ ಅಮುಗೆ ರಾಯಮ್ಮನ ವಚನ ಎಂದು ನಿರ್ದೇಶಿಸಲ್ಪಟ್ಟಿದೆ"[೧] ಎನ್ನುತ್ತಾರೆ.

'ಮಾರ್ಗ-೧'ರಲ್ಲಿ ಡಾ. ಎಂ.ಎಂ.ಕಲಬುರ್ಗಿಯವರು ಹೀಗೆ ಹೇಳುತ್ತಾರೆ. "ಅಮುಗಿದೇವಯ್ಯನ ಪತ್ನಿಯ ಹೆಸರು ರಾಯಮ್ಮನೆಂದು ಅನ್ಯಮೂಲಗಳಿಂದ ತಿಳಿದುಬರುತ್ತದೆ. ರಾಯಸದ ಮಂಚಣ್ಣಗಳ ಹೆಂಡತಿಯ ಹೆಸರೂ ರಾಯಮ್ಮನೆಂದು ಇಲ್ಲಿ ಹೇಳಲಾಗಿದೆ. ಹೆಸರಿನ ಈ ಸಾಮ್ಯತೆಯಿಂದಾಗಿ ಗೊಂದಲ ಸೃಷ್ಟಿಯಾದಂತಿದೆ.... 'ಗಂಡನ ಹೆಸರಿನಲ್ಲಿಯ ಅಮುಗಿ ದೇವಯ್ಯ, ಹೆಂಡತಿಯ ಮುದ್ರಿಕೆಯಲ್ಲಿಯ ಅಮುಗೇಶ್ವರಲಿಂಗ ಇವುಗಳ ಸಾಮ್ಯತೆಯ ಮೇಲೆ ಒತ್ತುಕೊಟ್ಟು ನಾವು ಅಮುಗೇಶ್ವರಲಿಂಗ ಮುದ್ರಿಕೆಯ 'ಅಂಗಕ್ಕಾಚಾರ ಮನಕ್ಕೆಜ್ಞಾನ' ಎಂಬ ವಚನವನ್ನು ಅಮುಗಿ ದೇವಯ್ಯರ ಪುಣ್ಯಸ್ತ್ರೀಯದೆಂದು ಇಟ್ಟುಕೊಳ್ಳಬಹುದು. ಆಗ 'ಗರುಡಿಯಲ್ಲಿ ಕೋಲಲ್ಲದೆ' ಎಂದು ಪ್ರಾರಂಭವಾಗುವ ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ ವಚನ ಬರೆದಿಲ್ಲವೆಂದೂ ಲಿಪಿಕಾರರು ಖಂಡಶಃ ಸಿಕ್ಕ ಅಮುಗೆರಾಯಮ್ಮನ ವಚನವನ್ನೇ ಹೆಸರಿನ ಸಾಮ್ಯಭ್ರಾಂತಿಯಿಂದ ರಾಯಸದ ರಾಯಮ್ಮನ ತಲೆಗೆ ಕಟ್ಟಿರುವರೆಂದೂ ಹೇಳಬಹುದಾಗಿದೆ"[೨] ಎನ್ನುತ್ತಾರೆ.

ಡಾ. ಎಚ್.ತಿಪ್ಪೇರುದ್ರಸ್ವಾಮಿಯವರು ಸಂಗ್ರಹಿಸಿರುವ ಶಿವಲಿಂಗಕವಿಯ "ಅಮುಗಿದೇವಯ್ಯಗಳ ಸಾಂಗತ್ಯ"ದಲ್ಲಿ ಅಮುಗಿ ದೇವಯ್ಯನಿಗೆ ಸಂಬಂಧಿಸಿದ ಒಂದು ಕತೆಯಿದೆ. ದೇವಯ್ಯನ ಪತ್ನಿ 'ರುದ್ರಾಣಿ' ಎಂದಿದೆ. ಸಿದ್ಧರಾಮನು ಕಪಿಲಸಿದ್ಧ ಮಲ್ಲಿಕಾರ್ಜುನನ ದೇವಾಲಯ ನಿರ್ಮಾಣ ಮಾಡಿ ಪರ್ವ ಮಾಡಿಸುವುದಕ್ಕಾಗಿ ಧಾನ್ಯದ ಕಣಜವನ್ನು ತೆಗೆದು ಬಡವಬಲ್ಲಿದರೆನ್ನದೆ ಕುಟ್ಟಿ ಹಸನುಗೊಳಿಸುವುದಕ್ಕಾಗಿ ಊರಿನಲ್ಲಿ ಕೊಟ್ಟಣ ಹಾಕಿಸಿದ. ಎಲ್ಲರೂ ತಮ್ಮ ತಮ್ಮ ಪಾಲಿಗೆ ಬಂದ ಕೊಟ್ಟಣವನ್ನು ಕುಟ್ಟಬೇಕಿತ್ತು. ಅಮುಗಿ ದೇವಯ್ಯ ಗುರುಲಿಂಗ ಜಂಗಮರ ಸೇವೆಗಲ್ಲದೆ ನರರ ಮತ್ತು ಸ್ಥಾವರ ಲಿಂಗಗಳ ಸೇವೆಗೆ ಶರೀರವನ್ನು ಬಳಲಿಸಲಾರೆನೆಂದು ಊರುಬಿಡಲು ನಿರ್ಧರಿಸಿ ಮನೆಯ ವಸ್ತುಗಳನ್ನೆಲ್ಲಾ ಮೂಟೆಕಟ್ಟಲು ಮೂರು ಹೊರೆಗಳು ಸಿದ್ಧವಾದವು. "ಮೂರು ಹೊರೆಗಳೇ? ಇರುವರಿಬ್ಬರಿಗೆ?" ಎಂದು ರುದ್ರಾಣಿ ಮನಸ್ಸಿನಲ್ಲಿಯೇ ನಕ್ಕಳು. ಅದರರ್ಥವಾಯಿತು ಅಮುಗಿದೇವಯ್ಯನಿಗೆ. "ಮೂರುಕಣ್ಣವನ ಕೈಯಲ್ಲಿಯೂ ಒಂದು ಹೊರೆಯನ್ನು ಹೊರಿಸುವನು" ಎಂದು ಮೂರು ಹೊರೆಗಳನ್ನು ಕಟ್ಟಿದುದರ ರಹಸ್ಯವನ್ನು ತನ್ನ ಹೆಂಡತಿಗೆ ತಿಳಿಸಿದ.

---

೧. ಆರ್.ಸಿ.ಹಿರೇಮಠ ಶಿವಶರಣೆಯರ ವಚನ ಸಂಪುಟ -೪.
೨. ಡಾ. ಎಂ.ಎಂ.ಕಲಬುರ್ಗಿ, ಮಾರ್ಗ-೧

ಕಪಿಲಸಿದ್ಧನೂ ಒಂದು ಹೊರೆಹೊತ್ತು ಕಲ್ಯಾಣದತ್ತ ನಡೆದನು. ಹೊರೆ ಇಟ್ಟು ಮಲ್ಲಿನಾಥನು ಸೊನ್ನಲಿಗೆಗೆ ಹಿಂದಿರುಗಿದನು. ಮಲ್ಲಿನಾಥನಿಗೆ ಅಭಿಷೇಕವನ್ನು ಮಾಡುವಾಗ ಎಣ್ಣೆಯೊತ್ತುತ್ತಿದ್ದಂತೆ 'ಅಯ್ಯಯ್ಯೋ' ಎಂದು ಚೀರಿದನು. ಆಗ ನಡೆದ ಸಂಗತಿ ತಿಳಿದು ಸಿದ್ಧರಾಮನು ಆ ಶರಣ ದಂಪತಿಗಳನ್ನು ಹಿಂದಿರುಗಿ ಊರಿಗೆ ಕರೆತರಲು ಕಲ್ಯಾಣಕ್ಕೆ ಬಂದಾಗ ದೇವಯ್ಯ ದಂಪತಿಗಳು ಹಿಂದಿರುಗಲು ಸಮ್ಮತಿಸಲಿಲ್ಲ.

ಹಲಗೆಯ ದೇವರು ಸಂಕಲಿಸಿದ "ಶೂನ್ಯಸಂಪಾದನೆ'ಯಲ್ಲಿ ಅಮುಗಿದೇವಯ್ಯನ ಕಥೆ ಬರುತ್ತದೆ. ಇಲ್ಲಿ ಅಮುಗಿದೇವಯ್ಯ ಭವಿಸೇವೆಯನ್ನು ಮಾಡೆನೆಂದು ತನಗೆ ಹಾಕಿದ ಕೊಟ್ಟಣವನ್ನು ತಿಪ್ಪೆಗೆ ಚೆಲ್ಲಿದ. ಆಗ ಸಿದ್ಧರಾಮ ತನ್ನ ನೊಸಲ ಕಣ್ಣನ್ನು ತೆಗೆದುಬೆಂಕಿಯ ಪ್ರವಾಹ ಹರಿಸಬಿಟ್ಟ. ಆಗ ಅಮುಗಿದೇವಯ್ಯ 'ಉಸುರುಗೂಡಿದ ಕುಂಚಿಕೆಯ ಹನಿಯ ತುಷಾರದಿಂದ' ಆರಿಸಿದ.

ಫ.ಗು.ಹಳಕಟ್ಟಿ "ಅಮುಗಿದೇವನಿಗೆ 'ರಾಯಮ್ಮ' ಎಂಬ ಹೆಂಡತಿ ಇದ್ದಾಗ್ಯೂ, ಆಕೆಯೂ ವಚನಕಾರ್ತಿಯಾಗಿದ್ದರೆಂದು ಆಕೆಯ ೪ ವಚನಗಳನ್ನು ಉದಾಹರಿಸಿದ್ದಾರೆ.

ಜಾನಪದ ಸಾಹಿತ್ಯದಲ್ಲಿಯೂ ಆಕೆಯ ಹೆಸರು 'ದಾನವ್ವ' ಎಂದಿದೆ. ಡಾ. ಬಿ.ಎಸ್.ಗದ್ದಗಿಮಠ ಸಂಪಾದಿಸಿರುವ 'ನೇಗಿಯ ಅಮುಗಯ್ಯ' ಹಂತಿಯ ಪದದಲ್ಲಿಯೂ ಇವರ ಕತೆ ಬರುತ್ತದೆ.

ಡಾ. ಎಚ್.ತಿಪ್ಪೇರುದ್ರಸ್ವಾಮಿಯವರು ಸಂಪಾದಿಸಿದ ಹರಿಹರನ 'ಅಮುಗಿದೇವಯ್ಯಗಳ ರಗಳೆಯಲ್ಲಿ –

"ಸೊನ್ನಲಿಗೆಯೆಂಬ ಪುರವಾ ಪುರದೊಳೊಪ್ಪುವಂ
ಸನ್ನುತ ಸದಾನಂದ ಶಿವಸುಖನಪ್ಪುವಂ
ಅಮುಗಿ ದೇವಗಳೆಂಬ ಸತ್ಯ ಸಮ್ಯಜ್ಞಾನಿ
ತನಗೆ ಸತಿ ವರದಾನಿ ಎಂಬ ಪೆಸರಾಗಿರಲು...."

ಇಲ್ಲಿಯೂ ಪತ್ನಿ 'ವರದಾನಿ' ಮತ್ತು ಊರು 'ಸೊನ್ನಲಿಗೆ' ಎಂದಿದೆ.

ಇಲ್ಲಿ ಎಲ್ಲಿಯೂ ರಾಯಸದ ಮಂಚಣ್ಣನ ಪತ್ನಿ ರಾಯಮ್ಮನೆಂದು ಉಲ್ಲೇಖಿಸಿಲ್ಲ. ಆದರೆ ಡಾ. ಜಯಶ್ರೀ ದಂಡೆಯವರು 'ಶರಣರ ಆಯ್ದ ವಚನಗಳ ವ್ಯಾಖ್ಯಾನ'ದ ಪುಟ – ೧೮೮ರಲ್ಲಿ

"ಅಮುಗಯ್ಯ ಶ್ರದ್ಧೆ, ನಿಷ್ಠೆಗಟ್ಟಿಗೊಂಡ ಶರಣ
ನಿಜವೀರಶೈವಾಗಮಾಚಾರದಲ್ಲಿ ಪರಿಣಿತಿಪಡೆದ ಶರಣ
ಅವನ ಹೆಂಡತಿ ಅವನಿಗನುಸಾರಿಯಾಗಿ ನಡೆದವಳು

ಅವಳ ಆದರ್ಶ ಎಂತಹದೆಂದರೆ ಪತಿ ಹೇಳಿದಂತೆ ನಡೆದುಕೊಳ್ಳುವುದು. ವಿನೀತ ಸ್ವಭಾವದ ಸದ್ಗೃಹಿಣಿಯಾಗಿ, ದೈವಸಂಪನ್ನೆಯಾಗಿ ಕಾಣುತ್ತಾಳೆಯೇ ಹೊರತು ದಿಟ್ಟತನದಿಂದ ಪ್ರತಿಕ್ರಿಯಿಸಿದ, ಪ್ರತಿಭಟಿಸಿದ ಶರಣೆಯಾಗಿ ಎಲ್ಲಿಯೂ ಕಾಣಿಸುವುದಿಲ್ಲ. ಅಂದಾಗ ಆಕೆಯ ವಚನಗಳಲ್ಲಿ ಆಕ್ರೋಶವಿರಲು ಸಾಧ್ಯವೇ ಇಲ್ಲ. ಆದರೆ 'ರಾಯಮ್ಮ' (ರಾಯಸದ ಮಂಚಣ್ಣನ ಹೆಂಡತಿ) ವಚನಗಳ ಧ್ವನಿಯೇ ಬೇರೆ. ಆಕೆಯ ವಿಡಂಬನೆಯ ಮೊನಚು ಎದುರಿಗಿದ್ದವರನ್ನು ನೇರವಾಗಿ ಚುಚ್ಚುತ್ತದೆ. ಆಕೆಯ ವಚನಗಳ ತುಂಬ ತಿರುಗಾಟದ ವಿಷಯ ಪ್ರಸ್ತಾಪವಾಗಿದೆ. ರಾಯಸದ ಮಂಚಣ್ಣನ ಕಾಯಕ ತಿರುಗಾಟವೇ ಆಗಿರುವುದರಿಂದ ಆ ಸಂದರ್ಭದಲ್ಲಿ ಕಾಣಿಸಿಕೊಳ್ಳಬಹುದಾದ ಹಲವಾರು ಮನುಷ್ಯ ಸ್ವಭಾವಗಳನ್ನು ಬಿಚ್ಚಿಟ್ಟಿದ್ದಾಳೆ"[೧] ಎಂದಿದ್ದಾರೆ.

ನನ್ನ ಪ್ರಶ್ನೆ ಏನೆಂದರೆ ರಾಯಸದ ಮಂಚಣ್ಣ ಬಸವಣ್ಣನವರ ಕಾಲದಲ್ಲಿ ಪತ್ರವ್ಯವಹಾರ ನೋಡಿಕೊಳ್ಳುತ್ತಿದ್ದವನು. ಹೋದಲ್ಲೆಲ್ಲಾ ಹೆಂಡತಿಯನ್ನೂ ಜೊತೆಗೆ ಕರೆದೊಯ್ಯುತ್ತಿದ್ದನೇ? ಅಲ್ಲದೆ ಅಮುಗಿದೇವಯ್ಯ ದಂಪತಿ ಸೊನ್ನಲಿಗೆ ಬಿಟ್ಟು ಕಲ್ಯಾಣಕ್ಕೆ ನಡೆದು ಬರುವಾಗ ತಾವು ಕಂಡ ಚಿತ್ರಣಗಳನ್ನೇಕೆ ವಚನಗಳಲ್ಲಿ ಅನುಭಾವಿಸಿರಲು ಸಾಧ್ಯವಿಲ್ಲವೇ? ಎಂದು ನನಗನ್ನಿಸುವಂತೆ ಎಲ್ಲಾ ಮೂಲದಲ್ಲಿ ಎಲ್ಲಿಯೂ ರಾಯಸದ ಮಂಚಣ್ಣನ ಹೆಂಡತಿ 'ರಾಯಮ್ಮ' ಎಂದು ಸ್ಪಷ್ಟವಾಗಿ ವಿವರಣೆ ಸಿಕ್ಕಿಲ್ಲ. ಸಿಕ್ಕಿರುವ ವಚನಗಳನ್ನೇ ಆಧರಿಸಿ ನಿರ್ಣಯಿಸಬೇಕಾಗಿದೆ. ಈಕೆ ಅಮುಗಿದೇವಯ್ಯನ ಪತ್ನಿ ಅಮುಗಿರಾಯಮ್ಮ ಎಂಬುದೇ ನನ್ನ ಅಭಿಮತ. ಈಕೆ ತಾವು ಕಂಡುಂಡ ಅನುಭಾವವನ್ನು ವಚನಗಳಾಗಿ ಉಣಬಡಿಸಿರುತ್ತಾರೆ.

"ಅಮುಗೆ ರಾಯಮ್ಮ ನೇಕಾರ ಕುಲದ ಅಮುಗೆದೇವಯ್ಯನ ಪತ್ನಿ ಇವಳ ಕಾಲವನ್ನು ಸು. ೧೧೬೦ ಎಂದು ಗುರುತಿಸಿ ಒಟ್ಟು ೧೧೬ ವಚನಗಳು ಈಕೆಯ ಹೆಸರಿನಲ್ಲಿವೆ".[೨]

"ಅಮುಗಿ ದೇವನ ವಚನಗಳ ಅಂಕಿತ ಸೋಮನಾಥ ಅಥವಾ ಸಿದ್ಧ ಸೋಮನಾಥ. ಪಂಡರಾಪುರಕ್ಕೆ ಸಮೀಪದಲ್ಲಿರುವ ಪುಳುಜ ಪುಳುಂಜ ಅಥವಾ ಪೂರ್ಣಜಾ (ಈಗ ಪುಳೂಜ ಅಥವಾ ಹೂಳಜ) ಎಂಬ ಗ್ರಾಮದಲ್ಲಿ ಲಿಂಗೇಶ್ವರ ದೇವಾಲಯವಿದೆ. ಆ ದೇವಾಲಯದಲ್ಲಿರುವ ಶಿಲಾಶಾಸನ ಐತಿಹಾಸಿಕ ದೃಷ್ಟಿಯಿಂದ ಬಹಳ ಪ್ರಮುಖವಾದುದು. ಯಾದವರಾಜ ಸಿಂಗಣನು ಅಮುಗಿದೇವಯ್ಯನವರಿಗೆ ಭಕ್ತಿಯಿಂದ ದಾನಕೊಟ್ಟುದರ ವಿವರವಾದ ಉಲ್ಲೇಖ ಈ ಶಾಸನದಲ್ಲಿದೆ. ಶಾಸನದಲ್ಲಿ ದೇವಾಲಯವನ್ನು

---

೧. ಡಾ. ಜಯಶ್ರೀದಂಡೆ ಶರಣರ 'ಆಯ್ದವಚನಗಳ ವ್ಯಾಖ್ಯಾನ'

೨. ವಚನಕಾರ್ತಿಯರು – ಡಾ. ಎಂ.ಎಸ್.ವೇದಾ

ಸಿದ್ಧಸೋಮನಾಥ ದೇವಾಲಯ ಎಂದು ಕರೆಯಲಾಗಿದೆ. ಸೊನ್ನಲಿಗೆಗೂ, ಪುಳಜೆಗೂ ಕೇವಲ ಇಪ್ಪತ್ತೆಂಟು ಮೈಲುಗಳ ಅಂತರವಿದೆ. ಆದುದರಿಂದ ಅಮುಗಿದೇವ ಸೊನ್ನಲಿಗೆಯದವನಾಗಿದ್ದರೂ ಪುಳಜೆಯ ಸಿದ್ಧಸೋಮನಾಥ ಅವನ ಇಷ್ಟದೈವವಾಗಿರುವುದು. ಕಲ್ಯಾಣದಲ್ಲಿರುವಾಗ ಆ ಇಷ್ಟದೈವದ ಅಂಕಿತದಿಂದಲೇ ವಚನಗಳನ್ನು ರಚಿಸಿದನು. ಕಲ್ಯಾಣದ ಕ್ರಾಂತಿಯ ನಂತರ ಅದನ್ನು ಬಿಡಬೇಕಾಗಿ ಬಂದಾಗ ಸೊನ್ನಲಿಗೆಗೆ ಹೋಗಲು ಇಷ್ಟಪಡದೇ, ತನ್ನ ಇಷ್ಟದೈವದ ಸನ್ನಿಧಿಯಲ್ಲಿಯೇ ಇರಬಯಸಿ ಅತ್ತ ಹೊರಟನೆಂದು ತಿಳಿಯುತ್ತದೆ"[೧] (ಶಿವಲಿಂಗ ಕವಿಯ ಅಮುಗಿದೇವಯ್ಯಗಳ ಸಾಂಗತ್ಯ, ಡಾ. ಹೆಚ್.ತಿಪ್ಪೇರುದ್ರಸ್ವಾಮಿ).

ಈ ಎಲ್ಲಾ ಚರ್ಚೆಯ ಹಿನ್ನೆಲೆಯಲ್ಲಿ ಅಮುಗಿದೇವಯ್ಯಗಳ ಪತ್ನಿಯೇ 'ರಾಯಮ್ಮ' ಎಂಬ ತೀರ್ಮಾನಕ್ಕೆ ಬರುವುದು ಹೆಚ್ಚು ಉಚಿತವೆನಿಸುತ್ತದೆ.

---

೧. ಶಿವಲಿಂಗ ಕವಿಯ ಅಮುಗಿದೇವಯ್ಯಗಳ ಸಾಂಗತ್ಯ – ಡಾ. ಹೆಚ್.ತಿಪ್ಪೇರುದ್ರಸ್ವಾಮಿ

# ಅಧ್ಯಾಯ – ೬
# ರಾಯಮ್ಮನ ವಚನಗಳ ಅಧ್ಯಯನ

ಅಮುಗೆರಾಯಮ್ಮನ ಒಟ್ಟು ೧೧೬ ವಚನಗಳನ್ನು ನಾನು ಅಧ್ಯಯನದ ದೃಷ್ಟಿಯಿಂದ ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡಿರುತ್ತೇನೆ.

೧. ವಿಡಂಬನೆ

೨. ಆತ್ಮನಿವೇದನೆ

೩. ವಿರಕ್ತ, ಲಿಂಗ, ಅರಿವು, ಅನುಭಾವ

೪. ನೈತಿಕಪ್ರಜ್ಞೆ

**ವಿಡಂಬನೆ:** ೧೨ನೇ ಶತಮಾನದಲ್ಲಿದ್ದ ಮೂಢನಂಬಿಕೆ, ಬಹುದೇವತಾ ಆರಾಧನೆ, ಜಾತಿಸಮಸ್ಯೆ, ಸಾಮಾಜಿಕ ಅಸಮತೋಲನಗಳನ್ನು ಕಣ್ಣಾರೆ ಕಂಡಿದ್ದ ಶರಣರು ಆ ಅವ್ಯವಸ್ಥೆಯನ್ನು ಹೋಗಲಾಡಿಸಲು ತಮ್ಮ ಅನುಭಾವಿಕ ನುಡಿಗಳನ್ನು ಬಳಸಿದರು. ಅವೇ ವಚನವೆಂದು ಖ್ಯಾತಿ ಪಡೆದವು. ವಚನಕಾರರು ಯಾರು ಕವಿ ಸಾಹಿತಿಗಳಾಗಬೇಕೆಂದು, ರಾಜರ ಮೆಚ್ಚುಗೆ ಪಡೆಯಬೇಕೆಂದು, ಬಿರುದಾಂಕಿತಗಳನ್ನು ಪಡೆಯಬೇಕೆಂದು ವಚನಗಳನ್ನು ರಚಿಸಲಿಲ್ಲ. ಅವ್ಯಾವೂ ಚಂಪುವಿನಂತೆ, ಸಂಸ್ಕೃತದಂತೆ ಕಠಿಣವಾಗಿರಲಿಲ್ಲ. ರಾಮಾಯಣವೋ, ಮಹಾಭಾರತವೋ ಅಥವಾ ಕಾಲ್ಪನಿಕ ಚಿತ್ರಣವೋ ಆಗಿರದೆ, ತಾವು ಕಂಡುಂಡ ನೋವು, ನಲಿವು, ಆಧ್ಯಾತ್ಮಿಕತೆ, ಸಮಾಜ ತಿದ್ದುವ, ನೀತಿ ಹೇಳುವ ಮಾತುಗಳಾಗಿದ್ದವು.

ವಿಡಂಬನೆ ಎಂದರೆ ಅಂಕುಡೊಂಕುಗಳನ್ನು ತಿದ್ದುವುದು. ಇದರ ಮುಖ್ಯ ಉದ್ದೇಶ ಪರಿಹಾಸ್ಯವಲ್ಲ. ಮತ್ತೊಂದಕ್ಕಿಂತ ತನ್ನದೇ ಶ್ರೇಷ್ಠವೆಂಬುದೂ ಅಲ್ಲ. ವಿಡಂಬಿಸುತ್ತಿರುವುದನ್ನೂ ಶ್ರೇಷ್ಠತೆಯ ಎಡೆಗೆ ಕೊಂಡೊಯ್ಯುವುದು. "ವಿಡಂಬನೆ ಉಪದೇಶವಲ್ಲ, ನೀತಿಬೋಧೆಯೂ ಅಲ್ಲ. ಅದು ತಪ್ಪಿತಸ್ಥರನ್ನು ತಿದ್ದುವ ನಗೆಬಾಣ ಅದು ಹಾಸ್ಯಮಯವಾಗಿದ್ದಷ್ಟೂ ಕ್ಷೇಮ. ಅಪಹಾಸ್ಯ, ಕೊಂಕುನುಡಿ, ವಕ್ರೋಕ್ತಿ, ಮೂದಲಿಕೆ, ಅವಹೇಳನ, ಹುಚ್ಚು ಹಾಸ್ಯ, ಗೇಲಿ, ಲೇವಡಿ, ಚತುರೋಕ್ತಿ, ಬೈಗುಳ, ನಿಂದೆ – ಈ ಮುಂತಾದ ರೂಪಗಳಲ್ಲಿ ವ್ಯಕ್ತಿ, ಸಮಾಜ ಸಂದರ್ಭಕ್ಕೆ ತಕ್ಕಂತೆ ಹೊರಹೊಮ್ಮುವುದು. ಈ ರೀತಿ ಹೊರಹೊಮ್ಮಿದ ವಿಡಂಬನೆಯನ್ನು ಶರಣರ ವಚನಗಳಲ್ಲಿ ವಿಪುಲವಾಗಿ ಕಾಣುವೆವು".[೧]

---

೧. ಡಾ. ವಿ.ಜೆ.ಪೂಜಾರ – ವಚನಗಳಲ್ಲಿ ಲೋಕ ವಿಡಂಬಣೆ, ಪು. ೨೦

ಒಳಗೊಂದು ಹೊರಗೊಂದು, ಭಕ್ತಿಯ ಕಪಟ ವೇಷಧಾರಿಗಳು, ಮೂಢನಂಬಿಕೆಯ ಆಚರಣೆಗಳು, ಬಹುದೇವತಾ ಪೋಷಣೆ, ಮನುಷ್ಯನ ಅಸಹಜ ವರ್ತನೆಗಳು, ಡಂಬಾಚಾರ, ಬೂಟಾಟಿಕೆ, ಭವಿಗಳನ್ನು ಕುರಿತು ವಚನಕಾರರು ನಿರ್ಭಯದಿಂದ ನುಡಿದಿರುವ ವಚನಗಳಿವೆ. ಅಂಥ ವಚನಕಾರರಲ್ಲಿ ಅಮುಗೆರಾಯಮ್ಮರೂ ಒಬ್ಬರು. ಅವರ ಆಯ್ದ ವಚನಗಳಲ್ಲಿನ ವಿಡಂಬನೆಯ ಸ್ವರೂಪವನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

"ಅಂಗಕ್ಕಾಚಾರ ಮನಕ್ಕೆ ಜ್ಞಾನ, ಸಮರಸಾದ್ವೈತವಾದ ಮತ್ತೆ
ಮನರವ ಪುನರ್ವೀಕ್ಷೆಯುಂಟೆ?
ಗರುಡಿಯಲ್ಲಿ ಕೋಲಲ್ಲದೆ, ಕಾಳಗದಲ್ಲಿ ಉಂಟೆ ಕೋಲು?
ಭವಿಗೆ ಮೇಲುವ್ರತ ಪುನರ್ಭಿಕ್ಷೆಯಲ್ಲದೆ, ಭಕ್ತರಿಗುಂಟೆ?
ವ್ರತತಪ್ಪಿ ಅನುಗ್ರಹವಿಡಿದ ನರಕಿಗಳಿಗೆ
ಮುಕ್ತಿ ಇಲ್ಲ ಎಂದೆ ಅಮುಗೇಶ್ವರ ಲಿಂಗದಲ್ಲಿ"[೧]

ದೀಕ್ಷೆ ಗುರುವಿನ ಕರುಣೆಯಿಂದ ಬರುವ ಈ ಶ್ರೇಷ್ಠ ಸತ್ಕಾರ ಒಮ್ಮೆ ಮಾತ್ರವೇ ವ್ಯಕ್ತಿಯ ಬಾಳಿನಲ್ಲಿ. ಈ ಆಚಾರವನ್ನು ಗುರುವಿನ ಅನುಗ್ರಹದಿಂದ ಅಂಗಕ್ಕೆ ಪಡೆಯುತ್ತೇವೆ. ಉದಾಹರಣೆಗೆ – ವಿಭೂತಿಧಾರಣೆ, ನುಡಿದಂತೆ ನಡೆ, ಮದ್ಯಮಾಂಸ ತ್ಯಜಿಸು, ಏಕಲಿಂಗ ನಿಷ್ಠೆ (ಪಂಚಾಚಾರಗಳೆಂಬ ಆಚಾರಗಳು) ಮನಕ್ಕೆ ಜ್ಞಾನ. ಅಂದರೆ ತನ್ನನ್ನು ತಾನು ಅರಿಯುವುದು ಇವೆಲ್ಲಾ ಒಮ್ಮೆ ಮಾತ್ರ ಸಾಧ್ಯ. ಇವು ಸಮರಸಾದ್ವೈತವಾದ ಮೇಲೆ ಮತ್ತೊಮ್ಮೆ ಪುನರ್ದೀಕ್ಷೆ ಬೇಕಿಲ್ಲ. ಗರುಡಿಯಲ್ಲಿ ಸಾಧನೆಗಾಗಿ ಕೋಲನ್ನು ಬಳಸುತ್ತಾರೆಯೇ ವಿನಃ ಯುದ್ಧದಲ್ಲಿ ಅಲ್ಲ. ಒಮ್ಮೆ ಭಕ್ತನಾದವನು ಇಷ್ಟಲಿಂಗದ ಅನುಗ್ರಹದಿಂದ ಶರೀರದಲ್ಲಿ ನಡೆಯುವ ಕಾಳಗ ಅಂದರೆ ಅರಿಷಡ್ವರ್ಗ ಅಷ್ಟಮದಗಳನ್ನು ಗೆಲ್ಲಲು ಶತ್ರುಗಳನ್ನು ಎದುರಿಸಲು ಸಿದ್ಧನಿರುತ್ತಾನೆ. ಈತನಿಗೆ ಪುನಃ ದೀಕ್ಷೆ ಏಕೆ? ಎಂದಿದ್ದಾರೆ. ಭವಿಯಾದವನಿಗೆ ಪುನರ್ದೀಕ್ಷೆಯುಂಟೆ ಹೊರತು ಭಕ್ತನಾದವನಿಲ್ಲ. ವ್ರತತಪ್ಪಿ ನಡೆಯುವ ನರಕಿಗಳಿಗೆ ಭವಿಗಳಿಗೆ ಮುಕ್ತಿ ಇಲ್ಲ ಎಂದು ಭವಿಗಳನ್ನು ರಾಯಮ್ಮ ವಿಡಂಬಿಸಿರುತ್ತಾರೆ.

"ಅಂಗದ ಆಪ್ಯಾಯನಕ್ಕೆ ಲಿಂಗವ ಮರೆದು
ತಿರುಗುವ ಭಂಡಭವಿಗಳನೇನೆಂಬೆನಯ್ಯಾ?
ಲಿಂಗದಲ್ಲಿ ನಿತ್ಯರಲ್ಲ; ಜಂಗಮದಲ್ಲಿ ಪ್ರೇಮಿಗಳಲ್ಲ!
ಹಿಡಿದ ಛಲದಲ್ಲಿ ಕಡುಗಲಿಗಳಲ್ಲ

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೮೬, ವ. ೫೪೯

ಮೃಡನ ಕಂಡೆಹೆನೆಂಬ ಮೂರ್ಖರಮುಖವನೋಡಲಾಗದು;
ಅವರಡಿಯ ಮೆಟ್ಟಲಾಗದು ಕಾಣಾ ಅಮುಗೇಶ್ವರಾ"[೧]

ಕೇವಲ ತೋರ್ಪಡಿಕೆಗೆ ಮಾತ್ರ ಲಿಂಗವಂತನಾದವನನ್ನು ವಿಡಂಬಿಸುತ್ತಾರೆ. ಲಿಂಗಧಾರಣೆಯಾದ ಮೇಲೆ ಆಚಾರದಿಂದ ನಡೆದು ಆಯತ-ಸ್ವಾಯತ ಸನ್ನಿಹಿತವಾಗಿ ತಾನೇ ಲಿಂಗವಾಗಬೇಕು. ಜಂಗಮ ಸೇವೆಯೇ ಶಿವನ ಸೇವೆಯೆಂದು ತಿಳಿಯಬೇಕು. ಇದೆಲ್ಲಾ ಬಿಟ್ಟು ಲಿಂಗದಲ್ಲೂ ನಿತ್ಯನಲ್ಲ, ಜಂಗಮನಲ್ಲೂ ಪ್ರೇಮಿಯಲ್ಲ, ಮುಂದಿನಹಾದಿಯಲ್ಲೂ ನಿಷ್ಠೆಯಿಲ್ಲದವನು, ತಾನು ಶಿವನನ್ನು ಕಂಡೆನೆನ್ನುವವನು ಮೂರ್ಖನು. ಅವನ ಮುಖವನ್ನು ನೋಡಲೂಬಾರದು. ಅವರ ಮನೆಯ ಅಡಿಯನ್ನು ಮೆಟ್ಟಲೂಬಾರದೆಂದು ವೇಷಧಾರಿ ಡಾಂಭಿಕರನ್ನು ವಿಡಂಬಿಸಿದ್ದಾರೆ.

"ಆಕಾಶಕ್ಕೆ ಹಾರುವಂಗೆ ದೋಣಿಯ ಕೋಲ ಹಂಗೇತಕಯ್ಯಾ?
ಭೂಮಿಯ ಸೋಂಕದೆ ನಡೆವವಂಗೆ ಭೂಮಿಯ ಹಂಗೇತಕಯ್ಯಾ?
ತನ್ನ ತಾನರಿದವಂಗೆ ಬಿನ್ನಾಣಿಗಳ ಮಾತೇಕಯ್ಯಾ?
ಅಗಮ್ಯವಾಗಿ ಚರಿಸುವಂಗೆ ಅಂಗನೆಯರ ಹಂಗೇತಕಯ್ಯಾ?
ಅಮುಗೇಶ್ವರಲಿಂಗವನರಿದ ಶರಣಂಗೆ
ಕಾವಿಕಾಷಾಂಬರವ ಹೊದ್ದು ತಿರುಗುವ ಕರ್ಮಿಗಳ ಹಂಗೇತಕಯ್ಯಾ?"[೨]

ಕಾವಿಕಾಷಾಂಬರವ ಹೊದ್ದು ತಿರುಗುವವರು ಕರ್ಮಿಗಳು. ಇವರ ಸಂಗ ಶರಣರಿಗಲ್ಲ ಎಂಬುದನ್ನು ದುಷ್ಟಾಂತಗಳೊಂದಿಗೆ ಉದಾಹರಿಸಿದ್ದಾರೆ. ಆಕಾಶದಲ್ಲಿ ಸಂಚರಿಸುವವನಿಗೆ ದೋಣಿಯ ಕೋಲ ಅವಶ್ಯಕತೆಯಿರುವುದಿಲ್ಲ. ಭೂಮಿಯನ್ನು ಸೋಂಕದೆ ನಡೆಯುವವನಿಗೆ ಭೂಮಿಯ ಹಂಗಿನ ಅವಶ್ಯಕತೆಯಿಲ್ಲ. ತನ್ನ ತಾನು ಅರಿದವನು ಅವನಿಗೆ ಭಿನ್ನಾಣಿಗಳ ಅವಶ್ಯಕತೆಯಿರುವುದಿಲ್ಲ. ಹೀಗೆ ಕಾವಿಕಾಷಾಂಬರವ ಹೊದ್ದು ತಿರುಗುವ ಭವಿಗಳ ಸಂಗವನ್ನು ಶರಣನಾದವನು ಮಾಡಬಾರದೆನ್ನುವ ಭಾವವಿದೆ.

"ಆಸೆವುಳ್ಳವಂಗೆ ಮಾಟಕೂಟವಲ್ಲದೆ,
ನಿರಾಸೆಯುಳ್ಳವಂಗೆ ಮಾಟಕೂಟವೇಕೆ?
ಮನಪರಿಣಾಮಿಗೆ ಮತ್ಸರವೇಕೆ?
ಸುತ್ತಿದ ಮಾಯಾಪ್ರಪಂಚವ ಜರಿದವಂಗೆ
ಅಂಗನೆಯರ ಹಿಂದು ಮುಂದೆ ತಿರುಗಲೇಕೆ?

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೮೬, ವ. ೫೯೦
೨. ಅದೇ., ಪು. ೧೯೦, ವ. ೬೦೨

ಅಮುಗೇಶ್ವರನೆಂಬ ಲಿಂಗವನರಿದವಂಗೆ
ಅಷ್ಟವಿಧಾರ್ಚನೆ ಷೋಡಶೋಪಚಾರದ ಹಂಗೇಕೆ"[೧]

ಶಿವನೊಡನೆ ಲಿಂಗದೊಡನೆ ಲಿಂಗಾಂಗ ಸಾಮರಸ್ಯ ಹೊಂದಬೇಕು. ಅರಿವನ್ನು ತಿಳಿಯಬೇಕೆಂಬ ಆಸೆಯಿರುವವನಿಗೆ ಮಾತ್ರ ಮಾಟಕೂಟ ಬೇಕು. ಅಂದರೆ ಅದಕ್ಕೆ ಸಂಬಂಧಿಸಿದ ಆಚರಣೆಗಳು, ವಿಧಿಗಳು ಬೇಕೇ ಹೊರತು, ಭವಿಗಲ್ಲ. ಮನಪರಿಣಾಮಿಗೆ ಅಂದರೆ ಮಾಯಾಪ್ರಪಂಚವ ಕಳೆದವನಿಗೆ ಅರಿಷಡ್ವರ್ಗಗಳ ಪರಿವಿಲ್ಲ. ಇಹಲೋಕದ ಲೌಕಿಕ ವಾಂಚನೆಗಳಿಂದ ಮುಕ್ತನೆನಿಸಿದವನಿಗೆ ಸ್ತ್ರೀಯ ಸಹವಾಸವೇಕೆ? ಲಿಂಗವನರಿದವನಿಗೆ ಅಷ್ಟವಿದಾರ್ಚನೆ, ಷೋಡಶೋಪಚಾರಗಳ ಹಂಗಿನ ಅವಶ್ಯಕತೆ ಬೇಕಿಲ್ಲ ಎಂದಿದ್ದಾರೆ.

"ಇಮ್ಮೈಯ ಸಿರಿವಂತರ ಕಂಡಡೆ
ಎನ್ನಯ್ಯಾ, ಇತ್ತ ಬನ್ನಿ ಎಂಬರಯ್ಯಾ
ಕರ್ಮಿಗಳ ಕಂಡಡೆ ಕತ್ತಹಿಡಿದು ನೂಕಂಬರಯ್ಯಾ
ಲಿಂಗವನಪ್ಪಿದ ನಿಜಶರಣರು ಅಮುಗೇಶ್ವರಲಿಂಗವ"[೨]

ಲೋಕದಲ್ಲಿ ಸಿರಿವಂತರಿಗೆ ಮನ್ನಣೆ, ಪ್ರಾಶಸ್ತ್ಯ ನೀಡುತ್ತಾರೆಯೇ ವಿನಃ ಬಡವರ ಮನ್ನಣೆಯಿಲ್ಲ ಎಂದು ವಿಡಂಬಿಸಿದ್ದಾರೆ. ನಿಜವಾದ ಕರ್ಮಿಗಳೇ ಬಡವರು. ತಮ್ಮ ಸತ್ಯ ಶುದ್ಧ ಕಾಯಕದಿಂದ ಜೀವಿಸುವ ಜೀವಿಗಳವರು. ಅವರನ್ನೇ ಕತ್ತಹಿಡಿದು ನೂಕೆನ್ನುತ್ತಾರೆ ಬಡವರು. ಅವರು ಲಿಂಗವನಪ್ಪಿದ ನಿಜಶರಣರು ಎನ್ನುತ್ತಾರೆ ರಾಯಮ್ಮ.

"ಇಷ್ಟಲಿಂಗವ ಪೂಜಿಸುವ ಗುಪ್ತಪಾತಕರನೊಲ್ಲೆ
ಅದೇನು ಕಾರಣವೆಂದಡೆ
ಆ ಲಿಂಗವ ಘನವನರಿದು ತ್ರಿಕಾಲಪೂಜೆಯ ಮಾಡಬಲ್ಲಡೆ
ಮಹಾನುಭಾವಿಗಳೆಂಬೆ ಅಮುಗೇಶ್ವರಲಿಂಗವ"[೩]

ಈ ವಚನದಲ್ಲಿ ರಾಯಮ್ಮ ಗುಪ್ತಾರಾಧಕರನ್ನು ವಿಡಂಬಿಸಿದ್ದಾರೆ. ಕೆಲವು ಶರಣರು ಹೊರಗಡೆ ಭವಿಗಳಂತೆ ಇದ್ದು ಒಳಗಡೆ ಇಷ್ಟಲಿಂಗ ಆರಾಧಕರಾಗಿದ್ದರು. ಇಷ್ಟಲಿಂಗ ಧಾರಣೆಯಾದ ಮೇಲೆ ತ್ರಿಕಾಲಪೂಜೆಯ ಮಾಡಬೇಕು. ಅಂಥವರು ಮಾತ್ರ ಮಹಾನುಭಾವಿಗಳು. ಹೊರಗಡೆ ಹೆದರಿ ಗುಪ್ತಾರಾಧನೆ ಮಾಡುವ ಇಬ್ಬಂದಿತನ ಬೇಡವೆಂದಿದ್ದಾರೆ ರಾಯಮ್ಮ.

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೯೯೧, ವ. ೬೦೪
೨. ಅದೇ., ಪು. ೯೯೧, ವ. ೬೦೫
೩. ಅದೇ., ಪು. ೯೯೧, ವ. ೬೦೭

"ಉತ್ತಮತೇಜಮಯರಿಗೆ ಸುಪ್ಪತ್ತಿಗೆಯಲ್ಲದೆ
ಕತ್ತೆಯಮರಿಗೆ ಸುಪ್ಪತ್ತಿಗೆಯ ಹಾಸುವರೆ?
ಅಜ್ಞಾನಿಗಳ ಹೃದಯದಲ್ಲಿ ಪರಮಾಮೃತವ ಸುರಿದಡೆ
ಪರರ ಕಾಡಿ ಬೇಡದೆ ಮಾಣ್ಬರೆ?
ಕುಂಜರನ ವೇಷವ ತೊಟ್ಟು ಹಂದಿಯಂತೆ ತಿರುಗುವ
ಅಜ್ಞಾನಿಗಳನೇನೆಂಬ ಅಮುಗೇಶ್ವರಲಿಂಗವೆ"[೧]

ಡಾಂಭಿಕ ವೇಷಧಾರಿಗಳನ್ನು ಕುರಿತಂತೆ ತನ್ನ ತಾ ಅರಿಯದ ಅಜ್ಞಾನಿಗಳನ್ನು ಕುರಿತು ಈ ವಚನದಲ್ಲಿ ವಿಡಂಬಿಸಿದ್ದಾರೆ. ಉತ್ತಮ ಜಾತಿಯ ಕುದುರೆಗೆ ಸುಪ್ಪತ್ತಿಗೆಯ ಹಾಕುತ್ತಾರೆಯೇ ವಿನಃ ಕತ್ತೆಯ ಮರಿಗಲ್ಲ. ಅಜ್ಞಾನಿಗಳಿಗೆ ಎಷ್ಟು ಬೋಧನೆ ಮಾಡಿದರೂ ಏನು ಪ್ರಯೋಜನವಿಲ್ಲ. ಇಂಥವರು ಆನೆಯ ವೇಷವತೊಟ್ಟ ಹಂದಿಯಂತೆ ಎಂದು ಟೀಕಿಸಿರುತ್ತಾರೆ.

"ಉತ್ತರಪಥಕ್ಕೆ ಹೋಗಿ ಮುಕ್ತಿಯನರಿದನೆಂಬವರು
ಅರಿಯಲಾರರು ನೋಡಾ
ಭಕ್ತನಾದೆನೆಂಬವರಲ್ಲ ಭವಿಗಳಾದರು ನೋಡಾ
ಜಂಗಮವಾದೆನೆಂಬವರೆಲ್ಲ ಜಗಭಂಡರಾದರು ನೋಡಾ
ಲಿಂಗೈಕ್ಯನಾದೆನೆಂಬುವರೆಲ್ಲ ಅಂಗವಿಕಾರಿಗಳಾದರು ನೋಡಾ
ಅಮುಗೇಶ್ವರಲಿಂಗವನರಿಯದಜ್ಞಾನಿಗಳ
ಲಿಂಗೈಕ್ಯರೆಂದಡೆ ಅಘೋರನರಕ ತಪ್ಪದು"[೨]

ಅಮುಗೇಶ್ವರಲಿಂಗವನರಿಯದ ಅಜ್ಞಾನಿಗಳನ್ನು ಕುರಿತಂತಹ ವಿಡಂಬನೆ ಹಿಮಾಲಯ, ಕಾಶಿ, ಕೇದಾರಕ್ಕೆ ಹೋದ ಮಾತ್ರಕ್ಕೆ ಮುಕ್ತಿ ಸಿಗಲಾರದು. ತಾನು ಭಕ್ತ ಎಂಬುವವ ಭವಿ ಆಗಿದ್ದಾನೆ. ಜಂಗಮನೆಂದು ತಿರುಗುವವ ಜಗಭಂಡನಾಗಿ ನಡೆಯುತ್ತಿದ್ದಾನೆ. ಲಿಂಗೈಕನಾದೆ ಎಂಬುವವರು ಆಸೆ ಆಮಿಷದಲ್ಲಿ ಬಿದ್ದಿದ್ದಾರೆ. ಇಷ್ಟಲಿಂಗ ಧಾರಣೆಯಾಗಿ ಗುರುಕಾರುಣ್ಯದಿಂದ ಇದ್ದಲ್ಲಿಯೇ ತನ್ನತಾನರಿವುದನ್ನು ಬಿಟ್ಟು ಮುಕ್ತಿಯ ಬಯಸಿ ತಿರುಗುವವರು ಅಘೋರನರಕಕ್ಕೆ ತೆರಳುತ್ತಾರೆ ಎಂಬುದು ವಚನದ ಅರ್ಥ.

"ಉದರ ಪೋಷಣಕ್ಕೆ ಗಿಡುಗಿಡುದಪ್ಪದೆ ತಿರುಗುವ ಕುನ್ನಿ
ಒಡೆಯನ ಗುರುತಬಲ್ಲುದೆ?

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೧, ವ. ೬೦೮
೨. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೨, ವ. ೬೧೦

ಮಳೆಗಾಲದಲ್ಲಿ ಮೀನು ಮಿಡಿಚೆಯ ತಿಂಬನರಿ
ಕತ್ತಲೆಯಬಲ್ಲುದೆ?
ಸತ್ತಹಂದಿಯ ತಿಂಬನಾಯಿ
ಬೆಳದಿಂಗಳಬಲ್ಲುದೆ?
ಕರ್ತನನರಿಯದ ವೇಷಧಾರಿಗಳು
ನಿಮ್ಮನೆತ್ತಬಲ್ಲರು ಅಮುಗೇಶ್ವರಾ"[೧]

ಭಕ್ತರೆಂದು ಸೋಗುಹಾಕುವ ವೇಷಧಾರಿಗಳನ್ನು ರಾಯಮ್ಮ ವಿಡಂಬಿಸಿದ್ದಾರೆ. ಉದರ ಪೋಷಣಕ್ಕೆ ತಿರುವ ನಾಯಿಯು ತನ್ನ ಒಡೆಯನನ್ನು ಗುರುತಿಸಲಾರದು. ಅದು ಬೀದಿನಾಯಾಗಿರುತ್ತದೆ. ನರಿಯು ಮಳೆಗಾಲದ ಮೀನು ಮಿಡಿಚೆಯನ್ನು ತಿನ್ನಲು ಬಯಸುತ್ತದೆಯೇ ಹೊರತು ಕತ್ತಲೆಯ ಅನುಭವ, ಮಳೆಗಾಲದ ಮೋಡಕವಿದ ಸೊಬಗನ್ನು ಬಲ್ಲದು. ಸತ್ತಹಂದಿ ತಿನ್ನುವ ನಾಯಿಗೆ ಬೆಳದಿಂಗಳ ಸವಿಕಾಣದು. ಭಕ್ತನೆಂಬ ವೇಷಧಾರಿಗಳಾರೂ ಕರ್ತಾರನನ್ನು ಕಾಣಲು ಅರಿಯರು. ಅರಿವನ್ನು ಪಡೆಯುವುದು ಸುಲಭವಲ್ಲ. ಸಾಧನೆಯಲ್ಲಿ ನಿರತನಾಗಿ, ಪಂಚಾಚಾರಗಳಲ್ಲಿ ನಿಷ್ಠೆಯುಳ್ಳವನಾಗಿರಬೇಕು. ಭಕ್ತನೆಂಬ ವೇಷಧಾರಿಗಳನ್ನು ಇಲ್ಲಿ ವಿಡಂಬಿಸಲಾಗಿದೆ.

"ಒಡೆಯರ ಕಂಡಡೆ ಬಡಿವುದಯ್ಯಾ ಬಾಲವನು ಸುನಿ
ಕೊಡುವ ಕೊಂಬುವರ ಕಂಡು ಅವರಡಿಗೆಗುವರಯ್ಯಾ
ಮೃಡನ ವೇಷವ ತೊಟ್ಟು
ಕುರಿಗಳಂತೆ ತಿರುಗುವ ಜಡಜೀವಿಗಳ ಕಂಡಡೆ
ಮೃಡನ ಶರಣರು ಮೋರೆಯನೆತ್ತಿ ನೋಡರು
ಕಾಣಾ ಅಮುಗೇಶ್ವರಾ"[೨]

ಇಲ್ಲಿಯೂ ಮೇಲಿನ ವಚನದಂತೆಯೇ ಶಿವನ ವೇಷವ ತೊಟ್ಟವರನ್ನು ವಿಡಂಬಿಸಲಾಗಿದೆ. ಒಡೆಯನನ್ನು ಕಂಡಕೂಡಲೆ ಬಾಲವನ್ನು ಅಲ್ಲಾಡಿಸಿ ಹರ್ಷಿಸುವ ನಾಯಿಯು ಅವರೇನಾದರೂ ಕೊಡುತ್ತಾರೆ ಅಥವಾ ಪ್ರೀತಿದೋರುತ್ತಾರೆಂದು ಬಯಸುವಂತೆ ಕೊಡುವವರು, ಕೊಂಬುವವರನ್ನು ಕಂಡರೆ ಅವರ ಅಡಿಗೆ ಎರಗುತ್ತಾರೆ. ಭಕ್ತರೆಂದು ವೇಷವ ತೊಟ್ಟವರು ಭವಬಂಧನದ ಆಸೆಗಳಿಂದ ದೂರನಾಗಿರಬೇಕು. ತ್ರಿಕರಣಪೂರ್ವಕ ಶುದ್ಧನಾಗಿರಬೇಕು. ಶಿವನ ವೇಷವ ತೊಟ್ಟು ಕುರಿಗಳಂತೆ ತಿರುಗುವ ಜಡಜೀವಿಗಳನ್ನು ಕಂಡರೆ ಇಂಥವರ ಮೋರೆಯನ್ನು ಶಿವಶರಣರು ನೋಡಲಾರರು ಎಂದಿದ್ದಾರೆ.

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೨, ವ. ೬೧೧
೨. ಅದೇ., ಪು. ೧೯೪, ವ. ೬೧೩

"ಒಡೆಯನ ಹೆಸರ ಹೇಳಿ ಒಡಲ ಹೊರೆವವರು ಕೋಟ್ಯಾನುಕೋಟಿ
ಮೃತನ ವೇಷವ ಧರಿಸಿ ಕಡುಗಲಿಗಳಾಗಿ
ಚರಿಸುವರ ಕಣ್ಣಿನಲ್ಲಿ ಕಾಣೆ
ನುಡಿವರು, ಮಾತಿನಲ್ಲಿ ಬ್ರಹ್ಮವ ನುಡಿದಲ್ಲಿ ಫಲವೇನು?
ಎನ್ನೊಡೆಯಾ, ಎನ್ನ ಬಿಡದೆ ಕಡುಗಲಿಯ ಮಾಡಯ್ಯಾ
ಅಮುಗೇಶ್ವರಾ"[೧]

ಇಲ್ಲಿಯೂ ಭಕ್ತನೆಂಬ ಪಾಷಾಂಡಿತನರನ್ನು ವಿಡಂಬಿಸಲಾಗಿದೆ. ಹೊಟ್ಟೆ ಹೊರುವುದಕ್ಕಾಗಿಯೇ ಇರುವವರು ಒಡೆಯನ ಹೆಸರ ಹೇಳಿ ಉದರ ಪೋಷಣೆ ನಿಮಿತ್ತಿಗಳು ದೇವನ್ನೆತ್ತ ಬಲ್ಲರು. ಮಾತಿಗೇನೂ ಕಡಿಮೆ ಇರಲಾರರು. ಬ್ರಹ್ಮತತ್ವ, ವೇದಾಂತಗಳಿಗೇನೂ ಕಡಿಮೆ ಇಲ್ಲ. ಇಂಥವರನ್ನು ಕಣ್ಣಿನಲ್ಲಿಯೂ ನೋಡಲು ಇಚ್ಛಿಸುವುದಿಲ್ಲ. ತನ್ನನ್ನು ಕಡುಗಲಿಯನ್ನಾಗಿ ಮಾಡಯ್ಯಾ ಎಂದಿದ್ದಾರೆ.

"ಕತ್ತಲೆಯಂತೆ ಬತ್ತಲೆಯಿದ್ದಡೇನು, ಇಷ್ಟಲಿಂಗ ಸಂಬಂಧಿಯಾಗಬಲ್ಲನೆ?
ಕಟ್ಟಿದ್ದ ಲಿಂಗವ ಕೈಯಲ್ಲಿ ಹಿಡಿದಡೇನು, ನಿತ್ಯನಾಗಬಲ್ಲನೆ?
ಅನಿತ್ಯವ ಹೊತ್ತುಕೊಂಡು ತಿರುಗುವ ಅಘೋರಿಗಳ ಕಂಡಡೆ
ಮಾಗಿಯ ಕೋಗಿಲೆಯಂತೆ ಮೋರೆಯತೋರೆನು ಅಮುಗೇಶ್ವರಾ"[೨]

ಇಷ್ಟಲಿಂಗ ಸಂಯೋಗ ಅಷ್ಟು ಸುಲಭವಲ್ಲ. ಕಟ್ಟಿದ್ದ ಲಿಂಗವನ್ನು ಕೈಯಲ್ಲಿ ಹಿಡಿದ ಮಾತ್ರಕ್ಕೆ ಭಕ್ತನಲ್ಲ. ಸಾಧನೆಯಲ್ಲಿ ತೊಡಗದೆ ಕೇವಲ ಲಿಂಗವಿಡಿದು ಕುಳಿತರೆ ಏನು ಪ್ರಯೋಜನ? ಇವರೆಲ್ಲಾ ಅಘೋರಿಗಳು. ಕತ್ತಲೆಯಂತೆ ಬತ್ತಲೆಯಿಂದ ಶಿವನರಿದೆವೆಂದು ತಿರುಗುವ ಮೂರ್ಖರು. ಇವರನ್ನು ಕಂಡರೆ ತಾನು ನೋಡುವುದಿಲ್ಲವೆಂದು ಒಂದು ಸಾದೃಶ್ಯದ ಮೂಲಕ ರಾಯಮ್ಮ ವಿವರಿಸಿದ್ದಾರೆ.

ಮಾಘ ಮಾಸದ ಕೋಗಿಲೆಯು ಹೇಗೆ ಮುಖ ತೋರದೆ ಕೂಗುವುದೋ ಹಾಗೆ ಇಂಥವರಿಗೆ ನಾ ಮುಖ ತೋರೆನೆನ್ನುತ್ತಾರೆ.

"ಕತ್ತೆಯನೇರಿ ಬಪ್ಪವರೆಲ್ಲಾ ನಿತ್ಯರಾಗಬಲ್ಲರೆ?
ಉಪ್ಪುಹುಳಿಯ ಮುಟ್ಟವರೆಲ್ಲ ಕರ್ತನ ಕಾಣಬಲ್ಲರೆ?
ಅಮುಗೇಶ್ವರನೆಂಬ ಲಿಂಗವನರಿದೆನೆಂಬವರು
ಅರಿಯಲರಿಯರು ಆರಾರು".

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೪, ವ. ೬೧೮
೨. ಅದೇ., ಪು. ೧೯೫, ವ. ೬೨೨

ಕರ್ತನ ಒಲುಮೆ, ಕರ್ತನ ಕರುಣೆಯ ಹಾದಿ ಅಷ್ಟು ಸುಲಭವಲ್ಲ. ಅದರ ಹಾದಿಯೇ ಬೇರೆ. ಅದಕ್ಕಾಗಿ ಮಾನಸಿಕವಾಗಿ ಸಾಕಷ್ಟು ಸಿದ್ಧತೆ ನಡೆಸಿ ಸಾಧನೆಗೈದು ನಿತ್ಯನಾಗಬೇಕು. ಹಾಗೆ ಮಾಡದೆ ಕತ್ತೆಯನೇರಿ ಬರುವವರು. ಅಂದರೆ ಲೌಕಿಕ ವಾಂಛನೆ ಇನ್ನೂ ಅಳಿದಿಲ್ಲದವರು. 'ಉಪ್ಪು ಹುಳಿ ತಿಂದು ಕಾಮವಿಕಾರಕ್ಕೆ ಒಳಗಾಗಿ ಭವದ ಜಂಜುಳಿಯಲ್ಲೇ ಓಲಾಡುವವರು ಲಿಂಗವನ್ನು ಅರಿಯಲಾರರು' ಎಂದಿದ್ದಾರೆ.

"ಕನ್ನವನಿಕ್ಕುವ ಕಳ್ಳನು ಕನ್ನಗಳ್ಳನೆಂದು ಉಸುರುವನೆ?
ಅನ್ಯರಕೂಡೆ ಬಣ್ಣಬಚ್ಚಣೆಯ ಮಾತಾಡುವ
ಣ್ಣ ಅಪ್ಪ ಎಂಬ ಕುನ್ನಿಗಳ ಮೆಚ್ಚುವನೆ ಅಮುಗೇಶ್ವರಲಿಂಗವು"[೧]

ವೇಷಧಾರಿ ವ್ಯಕ್ತಿಗಳನ್ನು ಕುರಿತ ವಿಡಂಬನೆಯ ವಚನವಿದು. ಕನ್ನಮಾಡಿ ಜೀವನ ನಡೆಸುವವನು ತಾನು ಕನ್ನಗಳ್ಳನೆಂದು ಹೇಳಿಕೊಳ್ಳುವುದಿಲ್ಲ. ಬೇರೆಯವರೊಡನೆ ಬಣ್ಣಬಣ್ಣದ ಅಣ್ಣ, ಅಪ್ಪ ಎಂಬ ವಯ್ಯಾರದ ಮಾತನಾಡುವವರು ಮೋಸಗಾರರು, ಅಂಥವರನ್ನು ಅಮುಗೇಶ್ವರ ಮೆಚ್ಚುವುದಿಲ್ಲವೆಂದು ವಿಡಂಬಿಸಿರುತ್ತಾರೆ.

"ಕಳ್ಳೆಯ ಸಂಗವ ಮಾಡಿ ಕಾಮವಿಕಾರವ ಮುಂದುಗೊಂಡು,
ನಿಜವಲ್ಲಭನ ಅರಿದೆನೆಂಬ ಕರ್ಮಿಗಳ ನೋಡಾ!
ಘಟಹರಿದವನಂತೆ ಸಟೆದಿಟವನಾಡುವಿರಿ,
ಪಶುಪತಿಯ ಅರಿವೆನೆಂಬ ಪಾಷಂಡಿಗಳ
ಮೆಚ್ಚುವನೆ ಅಮುಗೇಶ್ವರಾ"[೨]



ಇಲ್ಲಿಯೂ ಪಶುಪತಿಯನ್ನು ಅರಿದಿರುವನೆನ್ನುವ ಪಾಷಂಡಿಗಳನ್ನು ವಿಡಂಬಿಸಿದ್ದಾರೆ. ಕೆಟ್ಟಕೆಲಸಮಾಡಿ ಅರಿಷಡ್ವರ್ಗಗಳಿಗೆ ಬಲಿಯಾಗಿ ಕಾಮವಿಕಾರಕ್ಕೆ ಒಳಗಾದವನು ನಿಜವಲ್ಲಭನ ನಿಲುವನ್ನು ಅರಿಯಲಾರನು. ದೇಹದಮೇಲೆ ವಾಂಛೆ ಬಿಟ್ಟ ಭಕ್ತರಂತೆ ನಿಜನಟನೆಮಾಡಿ ಸತ್ಯದಂತೆ ನುಡಿಯುತ್ತೀರಿ. ಇಂಥವರೆಲ್ಲ ಪಾಷಂಡಿಗಳು. ಇವರನ್ನು ಅಮುಗೇಶ್ವರ ಮೆಚ್ಚುವುದಿಲ್ಲವೆಂದಿದ್ದಾರೆ.

"ಕಾಗೆಯಮರಿ ಕೋಗಿಲೆಯಾಗಬಲ್ಲುದೆ?
ಆಡಿನಮರಿ ಆನೆಯಾಗಬಲ್ಲುದೆ?
ಸೀಳನಾಯಿ ಸಿಂಹದ ಮರಿಯಾಗಬಲ್ಲುದೆ?
ಅರಿವು, ಆಚಾರ ಸಮ್ಯಜ್ಞಾನವನರಿಯದೆ

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೬, ವ. ೬೨೪
೨. ಅದೇ., ಪು. ೧೯೬, ವ. ೬೨೭

ನಾಮವ ಹೊತ್ತುಕೊಂಡು ತಿರುಗುವ ಗಾವಿಲರ
ಮುಖವನೋಡಲಾಗದು ಅಮುಗೇಶ್ವರಾ"[೧]

ಅಮುಗೆಯ ರಾಜಮ್ಮ ಆ ಕಾಲದಲ್ಲಿ ಕಂಡ ವೇಷಧಾರಿ, ಮೋಸದ ನಡೆನುಡಿಯ, ಡಾಂಭಿಕ ಭಕ್ತರು ಅಪಾರ ಸಂಖ್ಯೆಯಲ್ಲಿದ್ದಂತೆ ಕಾಣುತ್ತದೆ. ಹಾಗಾಗಿ ಹೇರಳವಾಗಿ ತೋರಿಕೆಯ ಜನರನ್ನು ಕುರಿತಂತೆ ವಚನಗಳು ಬಂದಿವೆ. ಸೀಳುನಾಯಿ, ಕತ್ತೆಗಳು, ಪಾಷಂಡಿಗಳು, ಕುನ್ನಿಗಳು ಹಂದಿಗಳು ಎಂದು ಇಂತಹ ನಟನಕಾರರನ್ನು ಕಂಡು ಅತ್ಯಂತ ತೀವ್ರ ಕಟುಭಾಷೆಯನ್ನು ಬಳಸಿ ಬಯ್ದಿದ್ದಾರೆ.

ಚಿತ್ ಚಿದಾನಂದ ಸ್ವರೂಪಿಯ ಅರಿವಾಗಿಲ್ಲ, ಪಂಚಾಚಾರಗಳಲ್ಲಿ ನಿರತನಾದವನೂ ಅಲ್ಲ. ನಾಮವ ಹೊತ್ತುಕೊಂಡು ತಿರುಗುವ ದಡ್ಡರನ್ನು ವಿಡಂಬಿಸಲಾಗಿದೆ. ಕಾಗೆಯ ಮರಿ ಕೋಗಿಲೆಯಂತಿದ್ದರೂ ಕೋಗಿಲೆಯಾಗಲಾರದು. ಆಡಿನ ಮರಿ ಆನೆಯಾಗಲಾರದು. ಸೀಳುನಾಯಿ ಸಿಂಹವಾಗಲು ಸಾಧ್ಯವಿಲ್ಲವೋ ಹಾಗೆ ಇಂಥವರೆಂದೂ ಭಕ್ತರಾಗಲಾರರು. ಅಂಥವರ ಮುಖ ನೋಡಲಾಗದೆಂದು ವಿಡಂಬಿಸಿರುತ್ತಾರೆ.

"ಕಾಮವಿಕಾರಕ್ಕೆ ತಿರುಗುವರು ಕೋಟ್ಯಾನುಕೋಟಿ;
ಕಡುಗಲಿಗಳನಾರನೂ ಕಾಣೆನಯ್ಯಾ
ಅಂಗಶೃಂಗಾರಿಗಳಾಗಿ ತಿರುಗುವರು ಕೋಟ್ಯಾನುಕೋಟಿ;
ಲಿಂಗಶೃಂಗಿಗಳನಾರನೂ ಕಾಣೆನಯ್ಯಾ
ವಚನರಚನೆಯ ಅರ್ಥ ಅನುಭಾವವ ಬಲ್ಲೆನೆಂದು
ಒಬ್ಬರನೊಬ್ಬರು ಜರಿದು ಸದ್ಯೋನ್ಮುಕ್ತರಾದೆವೆಂಬ
ಜಗಭಂಡರ ಮೆಚ್ಚುವನೆ ಅಮುಗೇಶ್ವರ ಲಿಂಗವು"[೨]

ಅಲ್ಪಸುಖದ ಬೆನ್ನಹತ್ತಿ ಶಾಶ್ವತ ಸುಖವನ್ನು ಕಳೆದುಕೊಳ್ಳುವವರನ್ನು ಇಲ್ಲಿ ವಿಡಂಬಿಸಲಾಗಿದೆ. ಕಾಮದ ವಾಂಛೆಗಳಿಗೆ ಬಲಿಯಾಗಿ ತೊಳಲಾಡುವವರು ಅಸಂಖ್ಯಾತಮಂದಿ. ಕಡುಗಲಿತನದಿಂದ ಕಾಮವಿಕಾರವ ಗೆದ್ದವರಾರನ್ನು ಕಾಣಲಿಲ್ಲ. ಅಂತರಂಗದ ಶುದ್ಧಿಬಿಟ್ಟು ಬಹಿರಂಗದ ಆಚರಣೆಗಳಿಂದ ತಿರುಗುವರು. ವಚನ, ಅನುಭಾವ, ಲಿಂಗದ ಅರಿವು ಬಲ್ಲೆನೆಂದು ಸೋಗನ್ನು ಹಾಕಿ ಒಬ್ಬರನ್ನೊಬ್ಬರು ಜರಿಯುತ್ತಾ ತಾವೇ ಸದ್ಯೋನ್ಮುಕ್ತರೆಂದು ಹೇಳಿಕೊಂಡವರನ್ನು ವಿಡಂಬಿಸಲಾಗಿದೆ.

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೭, ವ. ೬೨೮
೨. ಅದೇ., ಪು. ೧೯೭, ವ. ೬೩೦

"ಕಾಲಾಡಿಯಂತೆ ದೇಶದೇಶಕ್ಕೆ ತಿರುಗಲೇತಕ್ಕೆ?
ಪರಸಮಯದ ಜೈನನಂತೆ ನುಡಿಯಲೇತಕ್ಕೆ?
ಅರಿವುಳ್ಳವರ ಕಂಡು ಅಗಮ್ಯವ ನುಡಿಯಲೇತಕ್ಕೆ?
ಲಿಂಗವನಪ್ಪಿದ ನಿಜಮಹಿಮರ ಮಾತಕಲಿತು
ಮಂಡೆಯ ಬೋಳಿಸಿಕೊಂಡು ಈಶನ ವೇಷವತೊಟ್ಟು,
ಗ್ರಾಸಕ್ಕೆ ತಿರುಗುವ ವೇಷಧಾರಿಗಳ ಲಿಂಗೈಕ್ಯರೆಂದಡೆ
ಅಘೋರನರಕ ತಪ್ಪದು ಕಾಣಾ, ಅಮುಗೇಶ್ವರಾ"[೧]

ಮೃಡನ ವೇಷಧಾರಿಗಳನ್ನು ವಿಡಂಬಿಸಲಾಗಿದೆ. ಕಾಲಿಗೆ ಕಡಿವಾಣವೇ ಇಲ್ಲದೆ ಸುತ್ತುವವರು. ಕೈವಲ್ಯದ ಅರಿವಿಲ್ಲದೆ ಬೆತ್ತಲೆಯಾಗಿದ್ದ ಮಾತ್ರಕ್ಕೆ ಶಿವನ ಒಲುಮೆ ಒಲಿಯುವುದೇ? ಅರಿವನ್ನು ಸಂಪಾದಿಸಿದವರು ಯಾವ ಅಗಮ್ಯ ಬಿನ್ನಾಣದ ಮಾತಿನ ಮೋಡಿಗೂ ಒಳಗಾಗರು. ಲಿಂಗವನ್ನಪ್ಪಿದ ನಿಜಮಹಿಮರು ಅವರು. ಅವರ ನುಡಿ ಕಲಿತು, ಕೇಳಿದ ಮಾತ್ರಕ್ಕೆ ಇವರೂ ಅವರಂತೆ ಆಗುತ್ತಾರೆಯೇ? ಮಂಡೆಯ ಬೋಳಿಸಿಕೊಂಡು ಶಿವನ ವೇಷವ ತೊಟ್ಟು ತುತ್ತುಕೂಳಿಗಾಗಿ ಸುತ್ತುವ ವೇಷಧಾರಿಗಳು. ಇವರಿಗೆ ಅಘೋರ ನರಕ ತಪ್ಪದು ಎಂದು ಎಚ್ಚರಿಕೆ ನೀಡಿರುತ್ತಾರೆ.

"ಕಾವಿ ಕಾಷಾಂಬರವ ಹೊದ್ದು ಕಾಮವಿಕಾರಕ್ಕೆ ತಿರುಗುವ
ಕರ್ಮಿಗಳ ಮುಖವ ನೋಡಲಾಗದು
ಜಂಗಮವಾಗಿ ಜಗದಿಚ್ಛೆಯ ನುಡಿವ
ಜಂಗುಳಿಗಳಮುಖವ ನೋಡಲಾಗದು
ಲಿಂಗೈಕ್ಯರೆನಿಸಿಕೊಂಡು ಅಂಗವಿಕಾರಕ್ಕೆ ತಿರುಗುವ
ಲಿಂಗದ್ರೋಹಿಗಳ ಮುಖವ ನೋಡಲಾಗದು
ಕಾಣಾ, ಅಮುಗೇಶ್ವರ ಲಿಂಗವೆ"[೨]

ಸನ್ಯಾಸಿಗಳಮತೆ, ವಿರಾಗಿಗಳಂತೆ ವೇಷತೊಟ್ಟು ಕಾಮವಿಕಾರಕ್ಕೆ ಒಳಗಾಗುವರನ್ನು ವಿಡಂಬಿಸಲಾಗಿದೆ. ಜಂಗಮರಂತೆ ವೇಷತೊಟ್ಟು ಜಗದಿಚ್ಛೆಗೆ ಒಳಗಾಗಿ, ಅರಿಷಡ್ವರ್ಗಗಳಿಗೆ ಬಲಿಯಾಗಿ, ಅಂಗವಿಕಾರಕ್ಕೆ ಒಳಗಾದವರು ಜಂಗಮರಲ್ಲ, ಲಿಂಗದ್ರೋಹಿಗಳು ಅಂಥವರ ಮುಖ ನೋಡಬಾರದೆಂದು ವಿಡಂಬಿಸಿರುತ್ತಾರೆ.

ಡಂಬಾಚಾರಿಗಳ ಕುರಿತ ಮತ್ತೊಂದು ವಚನ;

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೭, ವ. ೬೩೧
೨. ಅದೇ., ಪು. ೧೯೮, ವ. ೬೩೩.

"ಕುಂಜರನ ಮರಿಯ ಸರಪಳಿಯಲ್ಲಿ ಕಟ್ಟುವರಲ್ಲದೆ,
ಹಂದಿಯ ಮರಿಯ ಸರಪಳಿಯಲ್ಲಿ ಕಟ್ಟುವರೆ ಅಯ್ಯಾ?
ಸಿಂಹದ ಮರಿಯ ಕಂಡಡೆ ಸೋಜಿಗಪಡುವರಲ್ಲದೆ
ಸಿಂಗಳೀಕಮರಿಯ ಕಂಡಡೆ ಸೋಜಿಗಪಡುವರೆ ಅಯ್ಯಾ?
ಕಸ್ತೂರಿಮೃಗದ ಕಂಡಡೆ ಆಶ್ಚರ್ಯಗೊಂಬರಲ್ಲದೆ
ಕತ್ತೆಯಮರಿಯ ಕಂಡಡೆ ಕಣ್ಣಿನಲ್ಲಿ ನೋಡರು ನೋಡಾ!
ಲಿಂಗವನಪ್ಪಿ ಅಗಲದಿಪ್ಪ ಲಿಂಗೈಕ್ಯನ ಕಂಡಡೆ
ಜಗವೆಲ್ಲಾ ಕೊಂಡಾಡುತಿಪ್ಪರು ನೋಡಾ!
ಅಮುಗೇಶ್ವರನೆಂಬ ಲಿಂಗವನರಿಯದ ಅಜ್ಞಾನಿಗಳ ಕಂಡಡೆ
ಕತ್ತೆಯಮರಿಯೆಂದು ಕಣ್ಣುಮುಚ್ಚಿಕೊಂಡಿಪ್ಪರು ನೋಡಾ!"[೧]

ಆನೆಯ ಮರಿಯನ್ನು ಸರಪಳಿಯಲ್ಲಿ ಕಟ್ಟುತ್ತಾರಲ್ಲದೆ, ಹಂದಿಯಮರಿಯನ್ನು ಕಟ್ಟುವುದಿಲ್ಲ. ಸಿಂಹದ ಮರಿಯನ್ನು ಕಂಡು ಸೋಜಿಗಪಡುತ್ತಾರಲ್ಲದೆ, ಕೋತಿಯ ಮರಿಯನ್ನು ಕಂಡು ಸೋಜಿಗಪಡುವುದಿಲ್ಲ. ಕಸ್ತೂರಿಮೃಗವನ್ನು ನೋಡಿದೊಡನೆ ಆಶ್ಚರ್ಯಪಡುತ್ತಾರಲ್ಲದೆ, ಕತ್ತೆಯಮರಿಯನ್ನು ಕಂಡರೆ ಆಶ್ಚರ್ಯಪಡಲಾರರು. ಲಿಂಗಾಂಗಸಾಮರಸ್ಯ ಹೊಂದಿದ ಲಿಂಗೈಕ್ಯನನ್ನು ಜಗತ್ತೆಲ್ಲಾ ಶರಣನೆಂದು, ಭಕ್ತನೆಂದು ಕೊಂಡಾಡುತ್ತರಲ್ಲದೆ, ಲಿಂಗವನ್ನು ಅರಿಯದ ಅಜ್ಞಾನಿಗಳನ್ನು ಕಂಡರೆ ಕತ್ತೆಯ ಮರಿಯೆಂದು ಕಣ್ಣುಮುಚ್ಚಿಕೊಳ್ಳುತ್ತಾರೆ. ಅಂಥವರನ್ನು ನೋಡಲಾಗದೆಂದು ವಿಡಂಬಿಸಿದ್ದಾರೆ.

"ಕೋಣವನೇರಿ ಕೋಡಗದಾಟನಾಡುವಂಗೆ
ಭಾರವಣಿಯ ಸುದ್ದಿಯೆಲ್ಲಿಯದು?
ಕರ್ತನನರಿಯದ ಕರ್ಮಿಗಳ ಕೈಯಲ್ಲಿ
ಇಷ್ಟಲಿಂಗವಿದುರ್ದು ಫಲವೇನು, ಅಮುಗೇಶ್ವರಾ"[೨]

ಶಿವನನ್ನು, ತನ್ನನ್ನು ಅರಿಯದೆ ಇಹಬಂಧನದಲ್ಲಿ ತೊಳಲಾಡುವವರನ್ನು ಈ ವಚನದಲ್ಲಿ ವಿಡಂಬಿಸಿರುತ್ತಾರೆ. ಕೋಣವನ್ನು ಏರಿ ಕೋಡಗದ ಆಟವ ಆಡುವ ನಿಷ್ಪ್ರಯೋಜಕರಿಗೇಕೆ ಹೊಣೆಗಾರಿಕೆ, ಜವಾಬ್ದಾರಿಯ ಮಾತೇಕೆ? ಜವಾಬ್ದಾರಿ ಏನೆಂದು ಅರಿಯರು ಕಪಿಯಂತೆ ಕಾಲಹರಣಮಾಡುವ ಕರ್ಮಿಗಳಿವರು. ಇವರಿಗೆ ಇಷ್ಟಲಿಂಗಕೊಟ್ಟರೂ ಪ್ರಯೋಜನವಿಲ್ಲ. ಲಿಂಗವಿದ್ದ ಮೇಲೆ ಸಾಧನೆಯಲ್ಲಿ ತೊಡಗಿ

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೮, ವ. ೬೩೫
೨. ಅದೇ ಪುಸ್ತಕ., ಪು. ೧೯೯, ವ. ೬೩೮

ಸರ್ವಾಂಗವನ್ನೂ ಲಿಂಗಾಂಗ ಸಾಮರಸ್ಯದಲ್ಲಿ ತೊಡಗಿಸದ ಭವಿಗಳನ್ನು ರಾಯಮ್ಮ ಹೀಗೆ ವಿಡಂಬಿಸಿದ್ದಾರೆ.

"ತುಪ್ಪಬೋನವನುಂಡು. ನಚ್ಚುಮೆಚ್ಚಿನಮಾತನುಡಿದು.
ರಚ್ಚೆಯಲ್ಲಿ ಕುಳಿತು ಇಷ್ಟಲಿಂಗವನಪ್ಪಿದವರ ನಿತ್ಯಜ್ಞಾನಿಗಳೆಂದಡೆ
ಪ್ರತ್ಯಕ್ಷವಾಗಿ ಸುರಿಯವೆ ಬಾಯಲ್ಲಿ ಬಾಲಹುಳು?
ನಿತ್ಯರಕಂಡು ನಿಂದಿಸಿವಂದಿಸಿದಡೆ
ಪ್ರತ್ಯಕ್ಷವಾಗಿಪರಶಿವನ ಶರಣರು ಹೊಟ್ಟೆಯ ಸೀಳದೆ ಮಾಣ್ಬರೆ?
ಅಮುಗೇಶ್ವರಲಿಂಗವನರಿಯದೆ
ಬರಿಯಮಾತಿನಲ್ಲಿ ಅರಿವು ಸಂಬಂಧಿಗಳೆಂದಡೆ
ನೀವು ಸಾಕ್ಷಿಯಾಗಿ ಮಾರಿಗೆ ಹೊಯಿದ
ಕೋಣನ ಕೋರಳ ಕೊಯಿದಂತೆ ಕೊಯ್ವರಯ್ಯಾ"[೧]

ಅಮುಗೇಶ್ವರ ಲಿಂಗವನರಿಯದ ಅಜ್ಞಾನಿಗಳನ್ನು ವಿಡಂಬಿಸಿರುತ್ತಾರೆ. ತಾವು ನಿತ್ಯಜ್ಞಾನಿಗಳೆಂದು ಸೋಗುಹಾಕುವ ಮೂರ್ಖನನ್ನು ಖಂಡಿಸುತ್ತಾರೆ. ಉದರ ಪೋಷಣೆಯಲ್ಲಿ ತೊಡಗಿ, ಜಿಹ್ವಾಚಾಪಲತೆಯನ್ನು ಬಯಸಿ, ತುಪ್ಪಬೋನ ಉಣ್ಣುತ್ತಾ, ನಚ್ಚುವಚ್ಚಿನ ಮಾತಿನ ಹರಟೆಯಲ್ಲಿ ಕಾಲ ಕಳೆಯುತ್ತಾ, ಕೂಗುತ್ತಾ, ತಾನೂ ಲಿಂಗವಪ್ಪಿದ ನಿಜಜ್ಞಾನಿಯೆಂದು ತಿರುಗಿದರೆ, ಪ್ರತ್ಯಕ್ಷವಾಗಿ ಬಾಯಲ್ಲಿಹುಳು ಸುರಿಯುವುದಾಗಿ ಎಚ್ಚರಿಸಿದ್ದಾರೆ. ಲಿಂಗಜ್ಞಾನಿ ಎನಿಸಿದವನಿಗೆ ಲೌಕಿಕ ವಾಂಛೆಗಳಿಂದ ಮುಕ್ತನಾಗಿರಬೇಕು. ಪರಶಿವನ ಶರಣರು ನಿತ್ಯರು. ಅವರೇ ಸಾಕ್ಷಾತ್ ಜಂಗಮಲಿಂಗ. ಅಂಥವರನ್ನು ನಿಂದಿಸಿದರೆ, ಶರಣರು ಹೊಟ್ಟೆಯ ಸೀಳಿಯಾರು! ಮಾತಿಗೆ ಮಾತ್ರ ತಾನು ಅರಿವನ್ನು ಸಂಪಾದಿಸಿರುವನೆಂದು ಹೇಳಿದವನಿಗೆ ಮಾರಿಗೆ ಬಲಿಕೊಡುವ ಕೋಣದ ಕೊರಳನ್ನು ಕೊಯ್ಯುವಂತೆ ಕೊಯ್ಯುತ್ತಾರೆಂದು ಎಚ್ಚರಿಸಿರುತ್ತಾರೆ.

"ತೊಗಲಬೊಕ್ಕಣದಲ್ಲಿ ಪಾಷಾಣದ ಕಟ್ಟುವರಲ್ಲದೆ,
ಪರುಷವ ಕಟ್ಟುವರೆ?
ಮಣ್ಣಹರವಿನಲ್ಲಿ ಸುರೆಯ ತುಂಬುಬವರಲ್ಲದೆ
ರತ್ನವ ತುಂಬುವರೆ?
ಆದ್ಯರ ವಚನಂಗಳಿರ್ದುದ ಕಾಣಲರಿಯದೆ
ನಾ ಘನತಾ ಘನವೆಂದು ಅಗಮ್ಯವ ಬೀರುವ

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೨೦೨, ವ. ೬೪೬.

ಅಜ್ಞಾನಿಗಳ ವಿರಕ್ತರೆಂಬೆನೆ? ಅನುಭಾವಿಗಳೆಂಬೆನೆ?
ನಿಜವನರಿದ ಲಿಂಗೈಕ್ಯರೆಂಬೆನೆ?
ಅಮುಗೇಶ್ವರ ಲಿಂಗವನರಿಯದ ಅಜ್ಞಾನಿಗಳ ಆರೂಢರೆಂಬೆನೆ"[೧]

ಲಿಂಗವನರಿಯದ ಅಜ್ಞಾನಿಗಳನ್ನು ದುಷ್ಟಾಂತಗಳೊಂದಿಗೆ ವಿಡಂಬಿಸಿರುತ್ತಾರೆ. ತೊಗಲಚೀಲದಲ್ಲಿ ಪಾಷಣವನ್ನು ಕಟ್ಟುವರೆ ಹೊರತು ಪುರುಷಮಣಿಯನ್ನು ಕಟ್ಟುವುದಿಲ್ಲ. ಮಣ್ಣಿನ ಪಾತ್ರೆಯಲ್ಲಿ ಮತ್ತು ತರುವ ಸುರೆಯನ್ನು ತುಂಬುತ್ತಾರೆಯೇ ಹೊರತು ರತ್ನವನ್ನು ಮಣ್ಣಿನ ಪಾತ್ರೆಯಲ್ಲಿ ಇಡರು. ಹಿರಿಯರ ವಚನಗಳೇ ಜೀವನಕ್ಕೆ ಮಾರ್ಗದರ್ಶಕ. ಅವುಗಳನ್ನು ತಿಳಿಯದೆ ತಾನೇ ಮೇಲೆಂದು ಅಹಂಕಾರದಿಂದ ಸೋಗುಹಾಕುವವರನ್ನು ವಿರಕ್ತ ಮತ್ತು ಅನುಭಾವ ಮತ್ತು ಲಿಂಗೈಕ್ಯರೆನಲು ಸಾಧ್ಯವಿಲ್ಲ. ಇಂಥವರು ಅಮುಗೇಶ್ವರನ ನಿಲುವನ್ನು ಅರಿಯಲಾರರು. ಇವರನ್ನು ಜ್ಞಾನದ ಉನ್ನತ ಸ್ಥಿತಿ ತಲುಪಿದವರೆನ್ನಲು ಬರುವುದಿಲ್ಲವೆಂದಿದ್ದಾರೆ.

"ಪೊಡವಿಯನಾಳುವರ ದೊರೆಗಳೆಂಬೆನೆ?
ಮೃಡನ ವೇಷವಧರಿಸಿದವರ ಕಡುಗಲಿಗಳೆಂಬೆನೆ?
ಅರಿವು ಆಚಾರವನರಿಯದವರ ಲಿಂಗೈಕ್ಯರೆಂಬೆನೆ?
ಎನ್ನೆನಯ್ಯಾ ಅಮುಗೇಶ್ವರಲಿಂಗವೆ"[೨]

ಕಾಡಿನಲ್ಲಿ ಆಳ್ವಿಕೆ ಮಾಡುವವನನ್ನು ಅರಸನು ಎನ್ನಲಾಗದು. ಶರಣ ವೇಷವ ಧರಿಸಿದ ಮಾತ್ರಕ್ಕೆ ಆತ ಲಿಂಗದರಿವನ್ನು ಪಡೆದವನೆನ್ನಲಾಗದು. ಲಿಂಗದ ಅರಿವು, ಆಚಾರಗಳನ್ನು ತಿಳಿಯದವನನ್ನು ಲಿಂಗೈಕ್ಯನೆನ್ನಲು ಸಾಧ್ಯವಿಲ್ಲ ಎಂಬುದು ಈ ವಚನದ ಅರ್ಥ.

"ಮಂಡೆಬೋಳಾಗಿ ತುಂಡುಂಗಂಬಳಿಹೊದ್ದ ಬಳಿಕ
ಅಂದಚಂದಗಳೇಕೆ?
ಖಂಡಿತನೆ ಕಂಡಕಂಡವರ ಮನಮೆಚ್ಚುವಂತೆ
ಅಂದಚಂದಗಳೇಕೆ
ಮಂಡೆಬೋಳಾದಡೆ ಮಹಾನುಭಾವಿಗಳು ಮೆಚ್ಚುವಂತೆ ಇರಬೇಕು
ಕಾಣಾ ಅಮುಗೇಶ್ವರಾ"[೩]

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೨೦೨, ವ. ೬೪೪
೨. ಅದೇ., ಪು. ೨೦೭, ವ. ೬೬೫
೩. ಅದೇ., ಪು. ೨೦೬, ವ. ೬೭೨

ಬಹಿರಂಗದ ಶೃಂಗಾರಕ್ಕಿಂತ ಅಂತಃರಂಗದ ಶೃಂಗಾರ ಮುಖ್ಯ. ಮಂಡೆಯನ್ನು ಬೋಳಾಗಿಸಿಕೊಂಡು ತುಂಡು ಕಂಬಳಿ ಹೊದ್ದು ಇಹಬಂಧನದಿಂದ ಮುಕ್ತಿಪಡೆದವನಿಗೇಕೆ ಅಂದಚಂದದ ಸೊಬಗು. ಅಂಗಶೃಂಗಾರಿಗಳು ಯೋಗಿಗಳಲ್ಲಿ, ಯೋಗಿಗಳಾದ ಮೇಲೆ ಶೃಂಗಾರಕ್ಕೆ ಮನಸೋಲಬಾರದು. ಮಂಡೆ ಬೋಳಾಗಿಸಿಕೊಂಡ ಮೇಲೆ ಮಹಾನುಭಾವಿಗಳು ಮೆಚ್ಚುವಂತೆ ಇರಬೇಕು. ಇಲ್ಲದಿದ್ದರೆ ಅಮುಗೇಶ್ವರ ಅಂಥವರನ್ನು ಒಪ್ಪುವುದಿಲ್ಲ ಎಂದಿದ್ದಾರೆ. ಮುಂದುವರಿದು ರಾಯಮ್ಮ –

"ಮಂಡೆಯ ಬೋಳಿಸಿಕೊಂಡು
ತುಂಡುಗಂಬಳಿಯ ಹೊದ್ದವರ ಕಂಡಡೆ
ನಂಬಲಾರೆ ನಚ್ಚಲಾರೆ
ಈ ವೇಷವ ನಾಚಿದೆ ಅಮುಗೇಶ್ವರಾ"[೧]

ಮಂಡೆಬೋಳಿಸಿ, ಕಂಬಳಿಹೊದ್ದು ತಿರುಗುವ ಗಾವಿಲರನ್ನು ವೇಷವ ಕಂಡು ನಾಚಿಕೆಪಡುವುದಾಗಿ ಅಭಿಪ್ರಾಯಪಡುತ್ತಾರೆ.

"ಮರ್ತ್ಯದಲ್ಲಿ ಹುಟ್ಟಿದವರೆಲ್ಲರೂ ಇಷ್ಟಲಿಂಗ ಸಂಬಂಧಿಗಳೇ?
ಗುರುವಿನಲ್ಲಿ ಉಪದೇಶವ ಪಡೆದವರೆಲ್ಲರೂ ವಿರಕ್ತರಾಗಬಲ್ಲರೆ?
ಭೂಮಿಯ ಮೇಲಣಕಾವಿಯ ಹೊದ್ದು ಕಾಯ ವಿಕಾರಕ್ಕೆ ತಿರುಗುವ
ಗಾವಿಲರ ಲಾಂಛನಿಗಳೆಂದಡೆ
ಅಮುಗೇಶ್ವರ ಲಿಂಗವು ನೋಡಿನೋಡಿನಗುಡಿಪ್ಪುದು"[೨]

ಈ ಮರ್ತ್ಯದಲ್ಲಿ ಹುಟ್ಟಿದ ಎಲ್ಲರನ್ನೂ ಲಿಂಗಾಂಗ ಸಾಮರಸ್ಯಪಡೆದವರು ಎನ್ನಲಾಗದು. ಭವಿಗಳೇ ಹೆಚ್ಚಾಗಿದ್ದಾರೆ. ಗುರುಕಾರುಣ್ಯದಿಂದ ಉಪದೇಶ ಪಡೆದ ಮಾತ್ರಕ್ಕೆ ವಿರಕ್ತನಲ್ಲ. ವಿರಕ್ತನ ಪರಿಯೇ ಬೇರೆ. ಅರಿಷಡ್ವರ್ಗಗಳನ್ನು ಗೆದ್ದವನು, ಕಾಮವಿಕಾರಕ್ಕೆ ಮನಸೋಲದವನು. ಕಾವಿ ಹೊದ್ದದ್ದು ಕೇವಲ ಭಕ್ತ, ವಿರಕ್ತನೆಂಬ ಸೋಗಿಗಾಗಿ. ಕಾಮವಿಕಾರಕ್ಕೆ ತಿರುಗುವವನು. ಬಹಿರಂಗದಲ್ಲಿನ ಲಾಂಛನಕ್ಕೆ ಮನಸೋಲಬಾರದು. ಅಂತರಂಗದ ಆಚರಣೆಯ ಮಹತ್ವ ಅರಿತಿರಬೇಕು. ಇಂಥವರು ಕೇವಲ ವೇಷಧಾರಿಗಳೆಂದು ವಿಡಂಬಿಸಿದ್ದಾರೆ.

"ಮನಕ್ಕೆ ಬಂದಂತೆ ಹಲವು ಪರಿಯ ವೇಷವ ತೊಟ್ಟು ಹರಿದಾಡುವ
ಜಾತಿಕಾರರ ಈಶ್ವರನು ಮೆಚ್ಚನು;

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೨೦೯, ವ. ೬೭೩.
೨. ಅದೇ., ಪು. ೨೧೦, ವ. ೬೭೪.

ಸದಾಶಿವನು ಸೈರಣೆಯ ಮಾಡನು
ಬಸವಾದಿ ಪ್ರಮಥರು ಬನ್ನಿ ಕುಳ್ಳಿರಿ ಎನ್ನರು
ಅಮುಗೇಶ್ವರಲಿಂಗವನರಿಯದ ಅನಾಚಾರಿಗಳ ಕಂಡಡೆ
ಬನ್ನಿ ಕುಳ್ಳಿರಿ ಎಂಬ ನುಡಿಯ ನುಡಿಯರು"[೧]

ಮನಸ್ಸಿಗೆ ಬಂದಂತೆ, ಕಾಮವಿಕಾರದಲ್ಲಿ ತೊಡಗಿ ಹೊಟ್ಟೆಹೊರೆಯಲು ಹಲವು ವೇಷವ ಹೊತ್ತು ತಿರುಗುವವರನ್ನು ಶಿವನು ಮೆಚ್ಚುವುದಿಲ್ಲ. ಇಂಥ ಡಾಂಭಿಕನನ್ನು ಶಿವನು ನೆನೆಯುವುದಿಲ್ಲ. ಬಸವಾದಿ ಮೊದಲಾದ ಶರಣರೂ ಬನ್ನಿ ಕುಳಿತುಕೊಳ್ಳಿ ಎನ್ನುವುದೂ ಇಲ್ಲ. ಇಂಥ ಅನಾಚಾರಿಗಳು ಅವರು ವೇಷವ ತೊಟ್ಟ ಇಬ್ಬಂದಿತನದವರನ್ನು ಅನೇಕ ವಚನಗಳಲ್ಲಿ ವಿಡಂಬಿಸಿದ್ದಾರೆ.

"ಮರವನೇರಿ ಹಣ್ಣನರಸಹೋದಡೆ
ಮರಮುರಿದುಬಿದ್ದ ಮರುಳುಮಾನವನಂತೆ
ಕೆಸರಿನೊಳಗಣಹುಲ್ಲಮೇಯಹೋದ ಪಶುವಿನಂತೆ
ಕೊಂಬೆಕೊಂಬೆಗೆ ಹಾರುವ ಕೋಡಗನಂತೆ
ಉಂಡಮನೆಯ ದೂರುವ ಒಡೆಕಾರನಂತೆ
ಹಳ್ಳಹಳ್ಳ ತಿಬ್ಬಳಿ ತಿರುಗುವ ಬಳ್ಳುವಿನಂತೆ
ಮಾತಿನಲ್ಲಿ ಬ್ರಹ್ಮವ ನುಡಿವ ವೇಷಧಾರಿಗಳ ಲಿಂಗಾಂಗಿಗಳೆಂದಡೆ
ಮಾರಿಗೆತಂದ ಹಂದಿಯ ನಾಯಿ ನರಿ ತಿಂಬಂತೆ
ಕಾಣಾ ಅಮುಗೇಶ್ವರಾ"[೨]

ಈ ವಚನದಲ್ಲಿ ವೇಷಧಾರಿಗಳ ವಿಡಂಬನೆಯಿದೆ. ವೇಷಧಾರಿಗಳು ಯಾವ ರೀತಿ ಅಪಾಯವನ್ನು ಎದುರಿಸಬೇಕಾಗುತ್ತದೆಂದು ವಿವರಿಸಿದ್ದಾರೆ. ಮರವನ್ನು ಏರಿ ಹಣ್ಣಿಗೆ ಆಸೆಪಡುವವನು ಟೊಂಗೆಮುರಿದು ಬಿದ್ದು ಬೀಳುವ ಮರುಳನಂತೆ, ಪ್ರಾಣಿಗಳಿಗೆ ಬುದ್ಧಿಮತ್ತೆ ಅಲ್ಪ. ಕೆಸರೆನ್ನುವುದನ್ನು ತಿಳಿಯದೆ ಹುಲ್ಲು ಮೇಯಲು ಹೋದ ಪಶುವಿನಂತೆ, ಕೋತಿಗೆ ಚಂಚಲತೆ ಹೆಚ್ಚು. ಕೊಂಬೆಕೊಂಬೆಗೆ ಹಾರುವ ಕಪಿಮನಸ್ಸು ತೊಂದರೆಗೆ ಕಾರಣವಾಗಬಹುದು. ಉಂಡಮನೆಯ ಹೆಂಚು ಎಣಿಸುವವನು ಒಡೆಯನೇ ಆದರೆ ಮುಂದೆ ಗತಿಯೇನು? ಹಳ್ಳಿಹಳ್ಳ ತಿರುಗುವ ನರಿಯಂತೆ, ಮಾತಿನಲ್ಲಿ ಬ್ರಹ್ಮವ ನುಡಿಯುವ ವೇಷಧಾರಿಗಳು ಮಾರಿಗೆ ಬಲಿತಂದಿರುವುದನ್ನು ತಿನ್ನುವ ನಾಯಿ ನರಿಯಂತಾಗುತ್ತಾರೆಂದು ವಿಡಂಬಿಸಿದ್ದಾರೆ.

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೨೧೦, ವ. ೬೭೫.
೨. ಅದೇ.,ಪು. ೨೧೦, ವ. ೬೭೬.

"ಮಾಯಾಯೋನಿಯಲ್ಲಿ ಹುಟ್ಟುವ ಮರುಳರೆಲ್ಲರು
ಮಹಾಜ್ಞಾನಿಗಳಪ್ಪರೆ?
ಕಾಮವಿಕಾರಕ್ಕೆ ತಿರುಗುವ ಜೀವಗಳ್ಳರು
ಅನಾದಿವಸ್ತುವನರಿವರೆ?
ಮಾತಿನಲ್ಲಿ ಮಹಾಜ್ಞಾನಿಗಳೆಂಬ ವೇಷಧಾರಿಗಳ ಕಂಡು
ನಾಚುವೆ ಕಾಣಾ ಅಮುಗೇಶ್ವರಾ"[೧]

ಮಾತಿನಲ್ಲಿ ಮಾತ್ರವೇ ಮಹಾಜ್ಞಾನಿಗಳಾದರೆ ಸಾಲದು. ಆಚರಣೆಯಲ್ಲಿದ್ದು ಅನಾದಿವಸ್ತುವಿನ ಮೂಲವನ್ನು ಅರಿಯಬೇಕು. ಹಾಗಿಲ್ಲದೆ ಲೌಕಿಕ ಮಾಯಾಪ್ರಪಂಚದ ಬಲೆಯಲ್ಲಿ ಸಿಲುಕಿ ನರಳುವ ಮರುಳರನ್ನು ಮಹಾಜ್ಞಾನಿಗಳೆನ್ನಲು ಸಾಧ್ಯವಿಲ್ಲ. ಕಾಮವಿಕಾರಕ್ಕೆ, ಬಲಿಯಾಗಿ ಕಾಯವನ್ನು ಕೆಟಿಸಿಕೊಳ್ಳುವವರನ್ನು ಕಂಡು ನಾಚಿಕೆಪಡುವುದಾಗಿ ವಿಡಂಬಿಸಿರುತ್ತಾರೆ.

"ವೇಷವ ತೊಟ್ಟು ಗ್ರಾಸಕ್ಕೆ ತಿರುಗುವ
ವೇಷಧಾರಿಗಳ ಕಂಡಡೆ ನಾಚಿತ್ತೆನ್ನ ಮನ
ಲಿಂಗವನರಿಯದೆ ಲಿಂಗೈಕ್ಯರೆಂಬ
ಅಂಗವಿಕಾರಿಗಳ ಕಂಡಡೆ ಹೊದ್ದದು ಎನ್ನಮನ
ಅರಿದು ಆಚರಿಸಿದೆನೆಂಬ ಅಜ್ಞಾನಿಗಳ ಕಂಡಡೆ
ಮೃಡನ ಶರಣರು ಮೆಚ್ಚುವರೆ ಅಮುಗೇಶ್ವರಾ
ಲಿಂಗವನರಿಯದಿರ್ದಡೆ ಎಂತು ಲಿಂಗೈಕ್ಯರೆಂಬೆನಯ್ಯಾ"[೨]

ಲಿಂಗವನ್ನು ಅರಿಯದವರು ಅಜ್ಞಾನಿಗಳು. ಇಂಥವರನ್ನು ಶರಣರು ಒಪ್ಪುವುದಿಲ್ಲ ಎಂದಿದ್ದಾರೆ. ವೇಷಧಾರಿಗಳು ಭಕ್ತರಲ್ಲ; ಭವಿಗಳು. ಭಕ್ತನ ಪರಿಯೇ ಬೇರೆ ಲಿಂಗವನು ಅರಿಯದೆ ಕೇವಲ ಕಾಟಾಚಾರಕ್ಕೆ ಧರಿಸಿದ ಮಾತ್ರಕ್ಕೆ ಇವರೆಲ್ಲಾ ಲಿಂಗೈಕ್ಯರಲ್ಲ. ತಾನು ಬಲ್ಲವನು, ಅರಿತವನೆಂದರೆ ಶರಣರು ಒಪ್ಪುವುದಿಲ್ಲ ಎಂದು ವಿಡಂಬಿಸಿರುತ್ತಾರೆ.

"ಸರ್ವಾಗಮ ಶ್ರುತಿಸ್ಮೃತಿ ಪುರಾಣ ಪಾಠಕನಾದಡೇನು?
ಸರ್ವಮಂತ್ರತಂತ್ರಸಿದ್ಧಿ ಮರ್ಮವರಿತಡೇನು?
ನಿತ್ಯಶಿವಾರ್ಚನೆತ್ರಿಕಾಲವಿಲ್ಲ;
ನಿತ್ಯಪಾದೋದಕ ಪ್ರಸಾದ ಸೇವನೆಯಿಲ್ಲ

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೨೧೧, ವ. ೬೭೮.
೨. ಅದೇ., ಪು. ೨೧೪, ವ. ೬೮೯.

ಇದೇತರ ವೀರಶೈವವ್ರತ, ಇದೇತರ ಜನ್ಮಸಾಫಲ್ಯ
ಅಮುಗೇಶ್ವರಲಿಂಗವೆ?"[೧]

ಆಗಮ, ಶ್ರುತಿ, ಸ್ಮೃತಿ, ಪುರಾಣಗಳಿಗೆಲ್ಲಾ ಅತೀತನಾದವನು ಭಗವಂತ. ಯಾವುದೇ ಮಂತ್ರತಂತ್ರಗಳ ಸಿದ್ಧಿಗೂ ಅಗೋಚರನು. ಅವನನ್ನು ಅರಿಯಬೇಕಾದರೆ ನಿತ್ಯ ತ್ರಿಕಾಲ ಪೂಜೆ, ಪಾದೋದಕ, ಪ್ರಸಾದ ಜಂಗಮ ಸೇವೆಯಲ್ಲಿ ನಿರತನಾಗಿರಬೇಕು. ಇವುಗಳಿಲ್ಲದ ಬದುಕು ಬದುಕೇ, ಅವರ ಜನ್ಮಸಾಫಲ್ಯವೇ? ಸಾಧ್ಯವಿಲ್ಲವೆಂದು ವಿಡಂಬಿಸಿರುತ್ತಾರೆ.

"ಸಿಂಹದ ಮರಿಯ ಸೀಳ್ನಾಯ ಸರಿ ಎನ್ನಬಹುದೇ?
ವರಹ ಕುಕ್ಕುಟನ ಸರಿ ಎನ್ನಬಹುದೇ?
ಹೊನ್ನು ಹೆಣ್ಣು ಮಣ್ಣ ಹಿಡಿದು ಲಿಂಗೈಕ್ಯರೆನಿಸಿಕೊಂಬ ಅಜ್ಞಾನಿಗಳೆಲ್ಲರು
ಸೀಳ್ನಾಯಿಗಳೆಂಬೆನಯ್ಯಾ
ಸಮ್ಯಕ್‌ಜ್ಞಾನವ ಮುಂದುಗೊಂಡು ಸದಾಚಾರಿಯಾಗಿ
ಭಕ್ತಿಭಿಕ್ಷವ ಬೇಡಬಲ್ಲಡೆ
ನಿತ್ಯಲಿಂಗೈಕ್ಯರೆಂಬೆ
ಅಮುಗೇಶ್ವರನೆಂಬ ಲಿಂಗಕ್ಕೆ ಅತ್ತತ್ತಲಾದ ಘನಮಹಿಮನೆಂಬೆನಯ್ಯಾ"[೨]

ಭವಿಗಳನ್ನು ಕುರಿತ ವಿಡಂಬನೆಯಿದೆ. ಸಿಂಹದ ಮರಿಯನ್ನು ಸೀಳುನಾಯಿಗೆ ಹೋಲಿಸಿ ಸರಿ ಎನ್ನಲಾಗದು. ಅದರಂತೆ ಹಂದಿಯನ್ನು ಕೋಳಿಗೆ ಹೋಲಿಕೆ ಮಾಡಲಾಗದು. ಹೊನ್ನು, ಮಣ್ಣು, ಹೆಣ್ಣಿಗಾಗಿ ಆಸೆಪಡುವವರಂತಹ ಅಜ್ಞಾನಿಗಳನ್ನು ಸೀಳ್ನಾಯಿಗೆ ಹೋಲಿಸಲಾಗಿದೆ. ಸಮ್ಯಕಜ್ಞಾನಿ ಎನಿಸಿ, ಸದಾಚಾರದಿಂದ ನಡೆವ ಭಕ್ತಮಾತ್ರ ಲಿಂಗೈಕ್ಯನೆನಿಸುತ್ತಾನೆ. ಅಂಥ ಶರಣ, ಭಕ್ತ, ಲಿಂಗಕ್ಕಿಂತಲೂ ಘನಮಹಿಮನೆನಿಸುತ್ತಾನೆ. ಭವಿಗಳನ್ನು ಎಂದಿಗೂ ಭಕ್ತರೊಡನೆ ಹೋಲಿಕೆ ಮಾಡಬಾರದೆಂದಿದ್ದಾರೆ.

"ಹೊಟ್ಟೆಯ ಹೊರೆವ ಪಶು, ಕಟ್ಟಿಕೊಲ್ಲುವುದಬಲ್ಲುದೆ?
ಕಷ್ಟಜೀವಗಳ್ಳರು; ಕರ್ತುವಿನ ವೇಷವ ತೊಟ್ಟು
ಕತ್ತೆಯಂತೆ ತಿರುಗುವ ಕಳ್ಳರನೊಲ್ಲ ಅಮುಗೇಶ್ವರಲಿಂಗವು"[೩]

ವೇಷಧಾರಿಗಳೆಲ್ಲಾ ಕತ್ತೆಯಂತೆ ತಿರುಗುವ ಕಳ್ಳರು. ಪಶುವಿಗೆ ಹೊಟ್ಟೆ ಹೊರೆವ ಚಿಂತೆ. ಒಂದಲ್ಲಾ ಒಂದು ದಿನ ತನ್ನನ್ನು ಕಟ್ಟಿ ಕೊಂದು ತಿನ್ನುತ್ತಾರೆನ್ನುವುದನ್ನು ಬಲ್ಲದು.

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೨೧೫, ವ. ೬೯೬.
೨. ಅದೇ., ಪು. ೨೧೬, ವ. ೬೯೮.
೩. ಅದೇ., ಪು. ೨೧೭, ವ. ೭೦೩.

ಅದನ್ನು ತಿಂದು ಹೊಟ್ಟೆ ಹೊರೆವ ಕಷ್ಟಜೀವಗಳ್ಳರು ಪಶುವಿಗಿಂತಲೂ ಕೀಳು. ಇವರು ಹೊಟ್ಟೆ ಹೊರೆಯುವುದಕ್ಕಾಗಿ ಮಾತ್ರ ಬದುಕಿರುತ್ತಾರೆಯೇ ವಿನಃ ಸಾಧನೆಗಾಗಿ ಅಲ್ಲ. ಅಂಥವರನ್ನು ಅಮುಗೇಶ್ವರ ಲಿಂಗವು ಒಪ್ಪುವುದಿಲ್ಲವೆಂದು ವಿಡಂಬಿಸಿರುತ್ತಾರೆ.

### ೨. ಆತ್ಮನಿವೇದನೆ

ಎಲ್ಲಾ ಶರಣರು ಭೌತಿಕ ವಸ್ತುವಿನ ಬೆನ್ನತ್ತಿ ಹೋಗದೆ, ಲಿಂಗರೂಪಿ ಪರಮಾತ್ಮನನ್ನು ತಮ್ಮ ಕರಸ್ಥಲ ಮಧ್ಯದಲ್ಲಿ ಇರಿಸಿ ನೋಡುತ್ತಾ ನೋಡುತ್ತಾ ತನ್ನನ್ನು ತಾನೇ ಆತ್ಮವಿಮರ್ಶೆ ಮಾಡಿಕೊಳ್ಳುತ್ತಾ ಪರಮಾತ್ಮನ ಜೊತೆಜೊತೆಗೆ ತನ್ನನ್ನು ಭಕ್ತಿಯೆಂಬ ಒರೆಗಲ್ಲಿಗೆ ಹಚ್ಚಿ ತನ್ನ ಆತ್ಮವಿಮರ್ಶೆ ತಾನೇ ಮಾಡಿಕೊಳ್ಳುತ್ತಾರೆ. ಆ ಮೂಲಕ ತನ್ನ ಮನದ, ಭಾವದ ಕಳವಳವನ್ನು ತನುವಿನ ವಿಕಾರವನ್ನು ಗೆಲ್ಲುವ ಛಲದಲ್ಲಿ ಲಿಂಗವನ್ನು ಏಕಭಕ್ತಿ ನಿಷ್ಠೆಯಿಂದ ಪೂಜಿಸುವಾಗ ತಮ್ಮ ಆತ್ಮದ ಕಳವಳವನ್ನು ಮತ್ತು ಆತ್ಮದ ಜೊತೆಯಾಗಿ ಬಂದ ಮನದ ಮರ್ಕಟತನದ ಆಟವನ್ನು ಪರಾಮರ್ಶೆಗೆ ಹಚ್ಚುತ್ತಾ ಮೂಲಾಗ್ರದಲ್ಲಿ ತಮ್ಮ ಆತ್ಮ ಪರಾಮರ್ಶೆ ತಾವೇ ಮಾಡುತ್ತಾ ತಮಗಾಗಿ ಮಾತ್ರವಲ್ಲದೆ ಮಾನವನ ಮನಸ್ಸು ಎಲ್ಲಿ ಎಡವುತ್ತಿದೆ ಎನ್ನುವುದನ್ನು ಶರಣರು ಪರಾಮರ್ಶೆ ಮಾಡುತ್ತಾ ನಿಜವಾದ ಭಗವಂತನ ನಿಲುವನ್ನು ಮುಟ್ಟುವ ಪರಿಯಲ್ಲಿ ಎಲ್ಲಾ ಶರಣರ ವಚನಗಳಲ್ಲಿ ಆತ್ಮನಿವೇದನೆಯನ್ನು ಕಾಣಬಹುದು.

ಆತ್ಮನಿವೇದನೆ ಎಂದರೆ ಪರಮಾತ್ಮನಲ್ಲಿ ತನ್ನ ಮನದಾಳದ ಭಕ್ತಿ, ನೋವು, ತೊಳಲಾಟಗಳನ್ನು ಬಿಚ್ಚಿಡುವುದು. ಯಾವ ವಚನಗಳು ಆತ್ಮವಿಮರ್ಶೆಗಳ ಬಗ್ಗೆ ಮಾತನಾಡುತ್ತವೆಯೋ ಆ ಎಲ್ಲಾ ವಚನಗಳು ತನ್ನನ್ನು ತಾನೇ ಅರಿಯುವ ಪ್ರಕ್ರಿಯೆಯಾಗಿದ್ದು ತನ್ಮೂಲಕ ದೇಹ, ಮನ, ಭಾವಗಳ ಜೊತೆಗೆ ಆತ್ಮವ ಹಿಡಿದು ಪರಮಾತ್ಮನ ಹಿಡಿಯುವ, ಮುಟ್ಟುವ, ಕೂಡುವ ಹಾಗೂ ಸ್ವಯಂ ಪರಮಾತ್ಮನೇ ತಾನಾಗುವ ಸತ್ಯದರ್ಶನವನ್ನು ಶರಣರ ಆತ್ಮವಿಮರ್ಶೆಯ ವಚನದಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಎಲ್ಲಾ ಶರಣರ ಮೊದಲಿನ ಮೂರ್‍ನಾಲ್ಕು ವಚನಗಳ ಸಾಲುಗಳು ಲೌಕಿಕ ಲೋಕದ ಅನುಭವವನ್ನು ಹೇಳಿದರೆ, ಕೊನೆಯ ಎರಡು ಸಾಲುಗಳು ಮಾತ್ರ ಅಂತರಂಗದ ಆತ್ಮಪ್ರಜ್ಞೆಯನ್ನು ಕುರಿತು ಮಾತನಾಡುತ್ತವೆ ಹಾಗೂ ಶಿವನನ್ನು ಕುರಿತು ಮಾತನಾಡುತ್ತವೆ. ಈ ಲೌಕಿಕ ಪ್ರಪಂಚನ್ನು ಪ್ರೀತಿಸಿದಷ್ಟೇ ಅಂತರಂಗದೊಳಗಿರ್ಪ ಶಿವನನ್ನು ಕೂಡ ಅಷ್ಟೇ ಪ್ರೀತಿಸಿದರು. ಇದೇ ಶರಣರ ಲೋಕಾನುಭವ ಮತ್ತು ಶಿವಾನುಭವವಾಗಿದೆ. ಈ ಶಿವಾನುಭವದಲ್ಲಿ ವಚನಗಳೇ ಆತ್ಮವಿಮರ್ಶೆಯಾಗಿವೆ. ಇಂಥ ಶರಣರಲ್ಲಿ ಅಮುಗೆರಾಯಮ್ಮನ ವಚನಗಳಲ್ಲಿ ಆತ್ಮನಿವೇದನೆಯ ಅಂಶಗಳನ್ನು ಕಾಣುವ ಪ್ರಯತ್ನ ಮಾಡಲಾಗಿದೆ.

"ಎನ್ನಅಂಗದಲ್ಲಿ ಅಗಮ್ಯವಾಗಿ ಬಂದ ಬಳಿಕ,
ನಿನ್ನ ನೆನೆವವನಲ್ಲ ನಾನು
ಎನ್ನ ಮನದಲ್ಲಿ ಮನೋಮೂರ್ತಿಯಾಗಿಪ್ಪೆಯಾಗಿ
ಮನದಲ್ಲಿ ನೆನೆವವನಲ್ಲವಯ್ಯಾ ನಿನ್ನ
ನೀನೆ ಪತಿಯಾಗಿ ನಾನೆ ಸತಿಯಾದ ಕಾರಣ
ನಿನ್ನ ನೆನೆವವನಲ್ಲ ನಾನು; ನಿನ್ನ ಪೂಜಿಸುವವನಲ್ಲ ನಾನು;
ನಿನ್ನ ರಚಿಸುವವನಲ್ಲ
ಎನಗೆ ನಿನಗೆ ಸಂದಿಲ್ಲದೆ ಸಮರಸವಯ್ಯಾ
ಎನ್ನ ಅರ್ಚನೆ ಪೂಜನೆ ನಷ್ಟವಾಯಿತ್ತು;
ಎನ್ನ ಕ್ರೀ ನಿಃಕ್ರೀಯ ಕೂಡಿತ್ತು
ಸಂದಿಲ್ಲದೆ ಸಮರಸವಾಗಿ ನಿಮ್ಮ ಸಂದೇಹವಿಲ್ಲದೆ ಕಂಡೆನು
ಮಹಾಲಿಂಗ ಅಮುಗೇಶ್ವರಲಿಂಗವೆ
ನಿಮ್ಮ ಶರಣ ಪ್ರಭುದೇವರ ಘನವ ನಾನೇನೆಂದುಪಮಿಸುವೆನಯ್ಯಾ"[೧]

ತನ್ನ ಅರಿವಿನ ಅತ್ಯುನ್ನತ ಶಿಖರವನ್ನು ವಚನಕಾರ್ತಿ ಇಲ್ಲಿ ಹೇಳಿದ್ದಾರೆ. ಎನ್ನ ಅಂಗದ ಮೇಲೆ ಅಗಮ್ಯತೀತನಾದ ನೀನೇ ಬಂದ ಮೇಲೆ ನಿನ್ನನೆನೆಯುವವನಲ್ಲ. ಅಂದರೆ ಅಂಗಮಯವೆಲ್ಲಾ ಲಿಂಗಮಯವಾದ ಮೇಲೆ ತಾನೇ ಸ್ವಯಂ ಲಿಂಗಾಂಗಿಯಾದ ಮೇಲೆ ಮತ್ತೆ ನೆನಹು ಏಕೆ? ನನ್ನ ಮನಸ್ಸಿನ ಮನೋಮೂರ್ತಿ ನೀನೇ ಆದಮೇಲೆ ಮತ್ತೆ ನೆನೆವನಲ್ಲ ನಾನು. ಶರಣಸತಿ ಲಿಂಗಪತಿಯಾದ ಮೇಲೆ ಪುನಃ ನೆನಹು ಏಕೆ? ಲಿಂಗಾಂಗದ ಅವಿನಾಭಾವ ಸಾಮರಸ್ಯ ಸಾಧ್ಯವಾದ ಮೇಲೆ ಪುನಃ ಪೂಜೆ, ಅರ್ಚನೆ ಬೇಕಿಲ್ಲ. ಸಾಧಾರಣ ಕ್ರಿಯೆಯೆಲ್ಲಾ ಕರ್ಮಾಧೀನ-ವಾದವುಗಳು. ನಿಷ್ಕಲ್ಮಷ ಮನಸ್ಸಿನಿಂದ ಮಾಡಿದ ಕ್ರಿಯೆಗಳೆಲ್ಲಾ ನಿಃಕ್ರೀಯವಾಗುತ್ತವೆ. ಆಗ ಸಂದೇಹವಿಲ್ಲದೆ, ಮಹಾಲಿಂಗದ ಅರಿವನ್ನು ಪಡೆಯಬಹುದು. ಘನಶರಣರಾದ ಪ್ರಭುದೇವರ ಘನವು ಉಪಮಾತೀತವಾದುದೆಂದು ತನ್ನ ಅಂತರಂಗದ ಅರಿವನ್ನು ಇಲ್ಲಿ ತೋಡಿಕೊಂಡಿರುತ್ತಾರೆ.

"ಎನ್ನ ಕಣ್ಣೊಳಗಣ ಕಟ್ಟಿಗೆಯ ಮುರಿವವರನಾರನೂ ಕಾಣೆ
ಎನ್ನ ಕಾಲೊಳಗಣ ಮುಳ್ಳ ತೆಗೆವವರನಾರನೂ ಕಾಣೆ
ಎನ್ನ ಅಂಗದಲ್ಲಪ್ಪ ಅಹಂಕಾರವ ಸುಡುವವರನಾರನೂ ಕಾಣೆ
ಎನ್ನ ಮನದಲ್ಲಪ್ಪ ಮಾಯಾಪ್ರಪಂಚವ
ಕೆಡಿಸುವವರನಾರನೂ ಕಾಣೆನಯ್ಯಾ

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೩, ವ. ೬೧೩.

ಆದ್ಯರವೇದ್ಯರ ವಚನಂಗಳಿಂದ
ಅರಿದೆವೆಂಬವರು ಅರಿಯಲಾರರು ನೋಡಾ
ಎನ್ನ ಕಣ್ಣೊಳಗಣ ಕಟ್ಟಿಗೆಯ ನಾನೆ ಮುರಿಯಬೇಕು
ಎನ್ನ ಕಾಲೊಳಗಣ ಮುಳ್ಳ ನಾನೆ ತೆಗೆಯಬೇಕು
ಎನ್ನ ಅಂಗದಲ್ಲಪ್ಪ ಅಹಂಕಾರವ ನಾನೆ ಸುಡಬೇಕು
ಎನ್ನ ಮನದಲ್ಲಪ್ಪ ಮಾಯಾ ಪ್ರಪಂಚವ ನಾನೇ ಕಳೆಯಬೇಕು
ಅಮುಗೇಶ್ವರಲಿಂಗವ ನಾನೆ ಅರಿಯಬೇಕು"[೧]

ನೋಟದಲ್ಲಿರುವ ಕಟ್ಟಿಗೆ ಎಂಬ ವಿಕಾರವನ್ನು, ಕಾಲಲ್ಲಿರುವ ದುಷ್ಕ್ರಿಯಾಚಾರವನ್ನು, ಅಂಗದಲ್ಲಿರುವ ಅಹಂಕಾರವನ್ನು, ಮನದಲ್ಲಿರುವ ಮಾಯಾಪ್ರಪಂಚವನ್ನು ತೊಡೆದುಹಾಕುವವರೂ ಯಾರನ್ನೂ ಕಾಣೆನು. ಅವರೆಲ್ಲಾ ಹಾದಿ ತೋರುತ್ತಾರೆಯೇ ಹೊರತು ನಮ್ಮೊಡನೆಬಾರರು. ಆದ್ಯರ ವಚನಗಳಿಂದ ಅರಿದೆವೆನ್ನುವವರು ಯಾರೂ ಇಲ್ಲ. ಈ ಎಲ್ಲಾ ವಿಕಾರಗಳನ್ನು ನಾವೇ ಹೋಗಲಾಡಿಸಲು ಪ್ರಯತ್ನಿಸಬೇಕೆ ಹೊರತು ಬೇರೊಬ್ಬರ ಸಹಾಯದಿಂದಲ್ಲ. ಶಿವಲಿಂಗದ, ತನ್ನನ್ನು ತಾನೇ ಅರಿಯುವ ಸಾಕ್ಷಾತ್ ಅರಿವನ್ನು ತಾನೇ ತಿಳಿಯಬೇಕೆ ಹೊರತು ಬೇರೊಬ್ಬರಿಂದಲ್ಲ ಎಂದು ಆತ್ಮಾವಲೋಕದ ವಚನವನ್ನು ಇಲ್ಲಿ ಕಾಣಬಹುದು.

"ಎನ್ನದೇಹವ ದಗ್ಧವ ಮಾಡಯ್ಯಾ
ಎನ್ನ ಕಾಯದಲಪ್ಪ ಕರ್ಮವ ತೊಡೆಯಯ್ಯಾ
ಎನ್ನ ಭಾವದಲ್ಲಪ್ಪ ಭ್ರಮೆಯ ಜರಿಯಯ್ಯಾ
ನಾ ಹಿಡಿದ ಛಲವ ಬಿಡದೆ ನಡೆಸಯ್ಯಾ ಅಮುಗೇಶ್ವರಲಿಂಗವೆ"[೨]

ಶಿವಸಾಕ್ಷಾತ್ಕಾರವನ್ನು ಅಂದರೆ ತನ್ನನ್ನು ತಾನು ಅರಿಯುವ ಈ ಛಲವನ್ನು ನಾನು ಬಿಡದೆ ಸಾಧಿಸಲು ಭಗವಂತನ ಒಲುಮೆಬೇಕೆಂದು ವಿನೀತಭಾವದಿಂದ ಅಮುಗೇಶ್ವರ ಲಿಂಗದಲ್ಲಿ ಕೇಳಿಕೊಳ್ಳುತ್ತಿದ್ದಾರೆ. ದೇಹವನ್ನು ದೇವಾಲಯ ಮಾಡು. ಭಗವಂತನನ್ನು ಕಾಣುವ ಜ್ಞಾನಕ್ಕಾಗಿ ದೇಹದಲ್ಲಿರುವ ಅಷ್ಟಮದಗಳು ಅಳಿದು ಗಟ್ಟಿಗೊಳಿಸು ಸರ್ವಾಂಗವೂ ಲಿಂಗಾಂಗವಾಗಿ, ಲಿಂಗಾರ್ಪಿತವಾಗಿ ಕಾಯದಲ್ಲಿರುವ ಸ್ಥೂಲ, ಸೂಕ್ಷ್ಮ, ಕಾರಣಂಗಳ ಕರ್ಮವ ತೊಡೆದು, ಭಾವದಲ್ಲಿರುವ ಭ್ರಮೆಯನ್ನು ಹೋಗಲಾಡಿಸು ನಾನು ಅರಿವನ್ನು ಮುಟ್ಟುವ ಛಲವನ್ನು ಸಾಕಾರಗೊಳಿಸು. ನಾನಾ ದೇವಾಲಯಗಳಲ್ಲಿರುವ ಸ್ಥಾವರ ದೇವರುಗಳ ಭ್ರಮೆ

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೩, ವ. ೬೧೪.
೨. ಅದೇ., ಪು. ೧೯೪, ವ. ೬೧೫.

ಹೋಗಲಾಡಿಸಿ, ಅರಿವನ್ನು ಸಂಪಾದಿಸುವ ಛಲವನ್ನು ಸಾಕಾರಗೊಳಿಸೆಂದು ಆರ್ತನಾದದಿಂದ ಭಗವಂತನಲ್ಲಿ ಕೇಳಿದ್ದಾರೆ.

"ಕತ್ತಲೆಯ ಮನೆಯಲ್ಲಿ ಸಕ್ಕರೆಯ ಸವಿದವನಂತಿರಬೇಕು
ಬಟ್ಟಬಯಲಲ್ಲಿ ನಿಂದು ಇಷ್ಟಲಿಂಗವ ಕಂಡವನಂತಿರಬೇಕು
ಇದಕ್ಕೆ ಗುರುವಿನ ಹಂಗೇಕೆ, ಲಿಂಗದಪೂಜೆ ಏಕೆ, ಸಮಯದ ಹಂಗೇಕೆ
ತನ್ನ ತಾನು ಅರಿದವಂಗೆ ಏಣಾಂಕನಶರಣರ ಸಂಗವೇಕೆ?
ಇಷ್ಟವನರಿದವಂಗೆ ನಾನೇನು, ನೀನೇನು ಎಂಬ
ಗೊಜಡಿನ ಭ್ರಮೆಯೇಕೆ ಅಮುಗೇಶ್ವರಾ"[೧]

ವಚನಕಾರರ ಪ್ರಕಾರ ತನ್ನ ತಾನರಿಯುವುದೇ ಶಿವನ ಸಾಕ್ಷಾತ್ಕಾರ. ಶಿವನೆಂದರೆ ಸ್ವಯಂ ಲಿಂಗವಾಗುವುದು. ಕತ್ತಲೆ ಅಜ್ಞಾನದ ಸೂಚಕ. ಈ ದೇಹವೆಂಬ ಕತ್ತಲೆಯ ಮನೆಯಲ್ಲಿ ಭಗವಂತನೆಂಬ ಸಕ್ಕರೆಯ ಸವಿ ಇದೆ. ಅದನ್ನು ಅರಿತು ಬದುಕನ್ನು ಬೆಳಕಿನಮನೆಯನ್ನಾಗಿ ಮಾರ್ಪಡಿಸಿಕೊಳ್ಳಬೇಕು. 'ಬಯಲು', ಶೂನ್ಯ' ವಚನಕಾರರ ಅಂತಿಮ ಮೋಕ್ಷದ ನಿಲುವು. ಅಲ್ಲಿ ಇಷ್ಟಲಿಂಗದ ಅರಿವಿನಿಂದ ಬಯಲಲ್ಲಿ ನಿಂತು ತನ್ನ ತಾನು ಅರಿಯಬೇಕು. ಈ ಅರಿವನ್ನು ಸಂಪಾದಿಸಿ ಸ್ವಯಂಲಿಂಗಿಯಾದವನಿಗೆ ಗುರುವಿನ ಹಂಗು ಬೇಕಿಲ್ಲ. ಸ್ಥಾವರಲಿಂಗಗಳ ಪೂಜೆ ಬೇಕಿಲ್ಲ. ಸಮಯದ ಹಂಗಿಗೆ ಒಳಗಾಗದೆ ಅರಿತವರಿಗೆ ಚಂದ್ರಮೌಳಿಯಾದ ಸ್ಥಾವರ ಲಿಂಗಗಳ ಸಂಗವೇಕೆ? ಕರಸ್ಥಲದಲ್ಲಿ ಕರತಲಮಯವಾಗಿರುವ ಜಗದಗಲ ಮುಗಿಲಗಲನ ನಿಲುವನ್ನು ಅರಿತಿರುವವನಿಗೆ ನಾನು ಬೇರೆ, ನೀನು ಬೇರೆಯೆಂಬ ಇಬ್ಬಂದಿತನದ ಗೊಂದಲದ ಭ್ರಮೆ ಬೇಕಿಲ್ಲ. ಸಕಲಾಂಗವೂ ಲಿಂಗಾಂಗವಾಗಿ ಸ್ವಯಂ ಲಿಂಗವಾಗಿರುವ ಆಕೆಯ ಅತ್ಯುನ್ನತ ಆತ್ಮದ ನಿವೇದನೆಯನ್ನು ಇಲ್ಲಿ ಕಾಣಬಹುದಾಗಿದೆ.

"ಕರ್ಮೇಂದ್ರಿಯಂಗಳ ಜರಿದು ಕಡುಗಲಿಯಾದೆನು
ವರ್ಮವನತಿಗಳೆದು ನಿರ್ಮಳನಾದೆನು
ಅಣ್ಣಾ ಅಪ್ಪಾ ಎಂದು ಬಿನ್ನಾಣದ ಮಾತನುಡಿಯೆನು
ಅನ್ನಕೂಳಿಕ್ಕುವರ ಮನೆಯ ಕುನ್ನಿಗಳಾಗಿಪ್ಪವರ
ಎನಗೆ ಸರಿ ಎಂಬೆನೆ ಅಮುಗೇಶ್ವರಾ?"[೨]

ಕಾಯಕರ್ಮ, ದೇಹ ಇಂದ್ರಿಯಾಸುಖಗಳ ವಾಂಛೆ ಅಳಿದು ತಾನು ಕಡುಗಲಿಯಾಗಿದ್ದೇನೆ. ಶಿವನೊಲುಮೆಯ ರಹಸ್ಯವನ್ನು ಅರಿತು ತಾನೇ ಲಿಂಗವಾಗಿ

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೫, ವ. ೬೨೧
೨. ಅದೇ., ಪು. ೧೯೬, ವ. ೬೨೫

ನಿರ್ಮಲವಾಗಿದ್ದೇನೆ. ತನ್ನೊಡನೆ ಭವಿಗಳ ಹೋಲಿಕೆ ಮಾಡಬಾರದೆಂದು ಅವರೆಲ್ಲಾ ಅನ್ನ ಕೂಳಿಕ್ಕುವರ ಮನೆಯ ಕುನ್ನಿಗಳು ಇನ್ನೂ ಅವರೆಲ್ಲಾ ಗುಡಿಗೋಪುರ ದೇವಾಲಯಗಳನ್ನು ಹರಸುವವರು. ಬಿನ್ನಾಣದ ಮಾತನ್ನುನುಡಿಯುವವರು. ಅವರೊಂದಿಗೆ ನಾನೆಂದೂ ಸಮನಿಲ್ಲ. ನನ್ನ ನಿಲುವೇ ಬೇರೆ ಎಂದು ಧೈರ್ಯವಾಗಿ ಉಸುರಿದ್ದಾರೆ.

"ಕಲಿಯುಳ್ಳವನಾಗಿ ಕಟ್ಟಿದೆನು ಬ್ರಹ್ಮನ ಮೇಲೆ ಬಿರಿದ
ನಿತ್ಯವುಳ್ಳವನಾಗಿ ಕಟ್ಟಿದೆನು ವಿಷ್ಣುವಿನ ಮೇಲೆ ಬಿರಿದ
ಅವಿರಳತತ್ವದಲ್ಲಿ ನಿಂದು, ಬಂದ ಭವಪಾಶಂಗಳ ಹರಿದು
ಕುಂದು ಹೆಚ್ಚಿಲ್ಲದೆ ಸಂದೇಹವನತಿಗಳೆದು ಕಟ್ಟಿದೆನು
ಎನ್ನ ಕರಣಂಗಳ ಕಟ್ಟಿದೆನಾಗಿ ರುದ್ರನ ಮೇಲೆ ಕಟ್ಟಿದೆನು ಬಿರಿದ
ಅಮುಗೇಶ್ವರಲಿಂಗವು ಅಪ್ಪಿಕೊಂಡ ಭಾಷೆ"[೧]

ಇಂದ್ರಿಯವೆಂಬ ಮರ್ಕಟನ ಆಟವನ್ನು ಗೆಲ್ಲುವ ತಂತ್ರವ ಬಲ್ಲವನೇ ಕಲಿ (ಶೂರಳು) ತಾನು ಕಲಿಯುಳ್ಳವಳಾಗಿ ಹುಟ್ಟು ಕಾರಣವಾದ ಬ್ರಹ್ಮನ ಮೇಲೆ ಬಿರಿದ ಕಟ್ಟಿರುತ್ತೇನೆ. ಹುಟ್ಟಿನ ಸ್ಥಿತಿಯನ್ನು ಅರಿತು ಆ ಮೂಲಕ ಒಡೆಯ ಭಗವಂತನ ಇರುವನ್ನು ಪಿಂಡಾಂಡ ಮೂಲದಲ್ಲಿ ಅರಿದೆ. ತಾನೇ ನಿತ್ಯ, ಸತ್ಯಳಾಗಿ ಅಂದರೆ ತಾನೇ ಸ್ವಯಂ ಲಿಂಗವಾಗಿ ವಿಷ್ಣುವಿನ ಮೇಲೆ ಬಿರಿದ ಕಟ್ಟಿದೆ. ಭಕ್ತಿಯ ಮೂಲಕ ಪಂಚೇಂದ್ರಿಯಗಳ ವಾಂಛೆಕಳೆದು ಭಕ್ತಿಗೆ ಇಂದ್ರಿಯಗಳ ಸಜ್ಜುಗೊಳಿಸಿದೆ. ಈ ಸಂದೇಹವ ಅತಿಗಳೆದು, ಸಂದೇಹವಿಲ್ಲದೆ ಪಂಚೇಂದ್ರಿಯಗಳನ್ನು ಹತೋಟಿಗೆ ತಂದು ಅವಿರಳತತ್ವದಲ್ಲಿ ಭವಪಾಶಂಗಳ ಗೆದ್ದು ಸಾವಿನ ಮರಣವನ್ನು ಗೆದ್ದಿರುವೆ. ಹುಟ್ಟು ಸಾವನ್ನು ಗೆದ್ದಿರುವ ಈ ಶರಣರಲ್ಲಿ ರಾಯಮ್ಮಳೂ ಒಬ್ಬಾಕೆ.

"ಕಾದಹಾಲನೊಣ ಮುಟ್ಟಬಲ್ಲುದೆ?
ಕಿಚ್ಚಿನೊಳಗಣ ಗುಂಡ ಬೆಕ್ಕುಮುಟ್ಟಬಲ್ಲುದೆ?
ಮರುಜವಣಿಯ ಕಡ್ಡಿ ಕಯ್ಯಲಿದ್ದವಂಗೆ ಸರ್ಪಕಡಿಯಬಲ್ಲುದೆ?
ಈ ತ್ರಿವಿಧವನರಿದವಂಗೆ ಹಿಂದೆ ಶಂಕೆಯಿಲ್ಲ, ಮುಂದೆ ಭೀತಿಯಿಲ್ಲ
ಕಳಂಕು ಇಲ್ಲದೆ ಅಮುಗೇಶ್ವರಲಿಂಗವು ಅಪ್ಪಿಕೊಂಡಿತ್ತು"[೨]

ಗುರು–ಲಿಂಗ–ಜಂಗಮ ತತ್ವವನ್ನು ಅರಿತವರಿಗೆ ಯಾವುದೇ ಕಳಂಕದ ಭೀತಿ ಬೇಕಿಲ್ಲ. ಅದನ್ನು ದೃಷ್ಟಾಂತಗಳೊಂದಿಗೆ ವಿವರಿಸಿದ್ದಾರೆ. ಹಾಲುಕಾದು ಪರಿಪಕ್ವವಾಗಿದೆ. ಅದನ್ನು ನೊಣ ಮುಟ್ಟಲು ಸಾಧ್ಯವಿಲ್ಲ. ಅಂದರೆ ಹಾಲು ಗುರುತತ್ವವನ್ನು ಬೋಧಿಸುತ್ತಿದೆ. ಗುರು

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೧೯೬, ವ. ೬೨೬
೨. ಅದೇ., ಪು. ೧೯೭, ವ. ೬೨೯

ಶಿವನೊಲುಮೆಯನ್ನು ತಿಳಿದವನು. ಆತನನ್ನು 'ಭವಿ' ಮುಟ್ಟಲು ಸಾಧ್ಯವಿಲ್ಲ. ಕಿಚ್ಚುವಿನಲ್ಲಿಗುಂಡಿದೆ. ಅದನ್ನು ಬೆಕ್ಕು ಮುಟ್ಟಲು ಸಾಧ್ಯವಿಲ್ಲ. ಗುಂಡು 'ಲಿಂಗದ ಕಲ್ಲನೆ. ಗುರುಕಾರುಣ್ಯದಿಂದ ಬಂದ 'ಇಷ್ಟಲಿಂಗ'ಕ್ಕೆ ಆಯವ, ಸ್ವಾಯತ, ಸನ್ನಿಹಿತ ಮಾಡಿಕೊಂಡು ಸಾಧನೆಗೈಯ್ದಾಗ ಮಾತ್ರ ಲಿಂಗದರಿವು ಸಾಧ್ಯವೇ ಹೊರತು ಬೆಕ್ಕಿನಂತಿರುವ ಭವಿಗಳಿಗಲ್ಲ. ಹುಟ್ಟು ಸಾವು ಗೆದ್ದಾತನೇ ಜಂಗಮ. ಈತನೇ ಮರುಜವಣಿ ಕಡ್ಡಿ. ಈತನಿಗೆ ಸರ್ಪ ಕಚ್ಚಿದರೂ ಏನೂ ಆಗುವುದಿಲ್ಲ. ಅಂದರೆ ಭವನ ಜಂಜಾಟವನ್ನು ಗೆದ್ದಿರುವ ಈತನಿಗೆ ಲೌಕಿಕ ಜೀವನದ ಹುಟ್ಟುಸಾವಿನ ಅರಿವಿರುವುದಿಲ್ಲ. ಈ ಮೂರು ತತ್ವವನ್ನು ಅರಿತವರಿಗೆ ಹಿಂದಿನ ಭವದ ಬಗೆಗೆ ಅನುಮಾನವಿಲ್ಲದ, ಭವಿಷ್ಯತ್ತಿನ ಭೀತಿಯೂ ಇಲ್ಲದೆ ಅಮುಗೇಶ್ವರಲಿಂಗ ಒಲಿಯುತ್ತಾನೆಂದಿದ್ದಾರೆ.

"ಕಾಲಿಲ್ಲದ ಕುದುರೆಯನೇರಿ ರಾವುತಿಕೆಯ ಮಾಡಬೇಕು
ಕಡಿವಾಣವಿಲ್ಲದ ಕುದುರೆಯ ನಿಲ್ಲಿಸಬೇಕು
ಕಾಲಿಲ್ಲದ ಕುದುರೆಯ ಬೀದಿಯಲ್ಲಿ ಕುಣಿಸಾಡಬಲ್ಲಡೆ
ಇಹಲೋಕಕ್ಕೆ ವೀರನೆಂಬೆ, ಪರಲೋಕಕ್ಕೆ ಧೀರನೆಂಬೆ
ಅಮುಗೇಶ್ವರಲಿಂಗಕ್ಕೆ ಅಧಿಕನೆಂಬೆ"[೧]

ಕಾಲಿಲ್ಲದ ಕುದುರೆ ಅಂದರೆ ಮನಸ್ಸು. ಈ ಮನಸ್ಸು ಕುದುರೆಗಿಂತಲು ಬಹಳ ಬೇಗ ಹಾಯುತ್ತದೆ. ಇದಕ್ಕೆ ಪಮಚೇಂದ್ರಿಯಗಳೇ ಕಡಿವಾಣ. ಅವುಗಳ ಪ್ರತಿಯೊಂದು ದ್ವಾರದಲ್ಲೂ ಲಿಂಗವನ್ನು ಸ್ಥಾಪಿಸಿಕೊಂಡು, ಲಿಂಗಾಂಗಮಯ ಮಾಡಿದಾಗ ಕುದುರೆಯನ್ನು ಹತ್ತೋಟಿಗೆ ತರಬಹುದು. ಈ ಕುದುರೆಯನ್ನು ಶಿವಪಥವನ್ನು ಅರಿವೆಂಬ ಪಥದಲ್ಲಿ ಸಿಲುಕಿಸಿದವನೇ ಇಹಲೋಕಕ್ಕೆ ವೀರ. ಪರಲೋಕಕ್ಕೂ ಧೀರ, ಅಮುಗೇಶ್ವರ ಲಿಂಗಕ್ಕೂ ಈತನೆ ಅಧಿಕನೆಂದಿದ್ದಾಳೆ. ಇಲ್ಲಿ ಆತ್ಮನಿವೇದನೆಗಿಂತ ಬೆಡಗಿನ ವಚನದ ಶೈಲಿಯನ್ನು ಗುರುತಿಸಬಹುದಾಗಿದೆ.

"ಕುಲವನತಿಗಳೆದವಂಗೆ ಕುಲದ ಹಂಗೇತಕಯ್ಯಾ?
ಬಲ್ಲೆನೆಂಬವಂಗೆ ಗೆಲ್ಲಸೋಲದ ಹಂಗೇತಕಯ್ಯಾ?
ಅಮುಗೇಶ್ವರನೆಂಬ ಲಿಂಗವನರಿದ ಶರಣಂಗೆ
ಈ ಸಮಯದ ಹಂಗೇತಕಯ್ಯಾ"[೨]

---

೧. ಶಿ.ಶ.ವ. ಸಂ. ವೀರಣ್ಣ ರಾಜೂರ, ಪು. ೯೮೮, ವ. ೬೩೨.
೨. ಅದೇ., ಪು. ೯೮೯, ವ. ೬೩೬

ಶರಣರೆಲ್ಲರೂ ಕುಲವನ್ನು ಅತಿಗಳೆದವರೆ, ಆವ ಕುಲವಾದಡೇನು? ದೈವ ಒಲಿದುದೇ ಕುಲ. ಕುಲಕ್ಕಿಂತಲೂ ಶಿವನೊಲುಮೆ ಮುಖ್ಯ ಎಂದು ಸಮತಾಭಾವ ತರಲು ಪ್ರಯತ್ನಿಸಿದವರು. ಕುಲದ ಹಂಗಿನಿಂದ ಹೊರಬಂದವರು. ಅಂದಿನ ಅವರ ಚಿಂತನೆ ಮುಂದಿನ ಅದೆಷ್ಟೋ ಶತಮಾನದವರೆಗೂ ವ್ಯಾಪಿಸಿರಬೇಕಾದ ವಿಶಾಲತೆ ಹೊಂದಿದೆ. ಕುಲವನ್ನು ಅತಿಗಿಳಿದು ತನ್ನ ತಾ ಅರಿತಿರುವ ಶರಣನಿಗೆ ಪುನಃ ಕುಲದ ಹಂಗುಬೇಕಿಲ್ಲ. ಅರಿವು ಜ್ಞಾನ ಸಂಪಾದಿಸಿರುವವನಿಗೆ ತಾನು ಮುಂದೆ ಅರಿವನ್ನು ಪಡೆಯುವ ಹಾದಿಯಲ್ಲಿ ಗೆಲ್ಲುತ್ತೇನೆಯೇ ಸೋಲುತ್ತೇನೆಯೇ ಎಂಬ ಚಿಂತೆ ಬೇಕಿಲ್ಲ. ಲಿಂಗವರಿತ ಶರಣನಿಗೆ ಧರ್ಮದ ಹಂಗಿಲ್ಲ ಎಂಬುದು ಇದರರ್ಥ.

"ಗುರುವಿನಡಿಗೆರಗೆನೆಂಬ ಭಾಷೆ ಎನಗೆ
ಲಿಂಗವ ಪೂಜಿಸಿ ವರವ ಬೇಡೆನೆಂಬ ಭಾಷೆ ಎನಗೆ
ಜಡೆಮುಡಿಯುಳ್ಳ ನಿಜಜಂಗಮವ ಕಂಡು
ಅಡಿಗೆರಗದ ಭಾಷೆ ಎನಗೆ
ಹಿಡಿದ ಛಲವ ಬಿಡದೆ ನಡೆಸಿ
ಮೃಡನ ಪಡೆದೆಹೆನೆಂಬ ಭಾಷೆ ಎನಗೆ
ಕಡುಗಲಿಯಾಗಿ ಆಚರಿಸಿ ಜಡಿದೆನು
ಅಜ್ಞಾನಿಗಳ ಬಾಯ ಕೆರಹಿನಲ್ಲಿ
ಮಾತಿನಲ್ಲಿ ವೇಷಧಾರಿಗಳು ಮೃಡನ ಅರಿದೆಹೆನೆಂದುಗಳಹುತಿಪ್ಪರೆ
ಕೆರಹಿನಟ್ಟಿಯಲ್ಲಿ ಹೊಯ್ಯದೆ ಮಾಣ್ಬನೆ ಅರಿವುಳ್ಳ ಘನಮಹಿಮನು"?[೧]

ಅಮುಗರಾಯಮ್ಮ ಕೆಲವೊಂದು ಭಾಷೆಯನ್ನು ಕೈಗೊಂಡಿರುವುದಾಗಿ ಇಲ್ಲಿ ಹೇಳಿರುತ್ತಾರೆ. ಅರಿವನ್ನು ತೋರಿಸುವ ಗುರು ಎಂದಿಗೂ ಲಘುವಾಗಿರಬಾರದು. ಲಘುವಿನ ವರ್ತನೆಯವನು ಎಂದಿಗೂ ಗುರುವಾಗಲಾರ. ಅಂಥ ಗುರುವಿನ ಪಾದಕ್ಕೆ ತಾನು ಎರಗುವುದಿಲ್ಲ. ಲಿಂಗವ ನಿಷ್ಠೆಯಿಂದ ಧ್ಯಾನಿಸಿದರೆ ಕೇಳಬೇಕಿಲ್ಲ. ಬೇಡಿತ್ತ ನೀವ. ಪ್ರತಿಫಲಾಪೇಕ್ಷೆಯಿಲ್ಲದ ಪೂಜೆ ಮುಖ್ಯ, ವರವ ಬೇಡುವುದಿಲ್ಲವೆಂಬ ಭಾಷೆ ತಾನು ಕೈಗೊಂಡಿರುವುದಾಗಿ ತಿಳಿಸಿದ್ದಾರೆ. ಜಂಗಮರಂತೆ ವೇಷಧಾರಿಗಳ ಕಂಡರೆ ತಾನು ಅವರ ಅಡಿಗೆ ಎರಗುವುದಿಲ್ಲವೆಂಬ ಭಾಷೆ ಕೈಗೊಂಡಿದ್ದಾರೆ. ಜಡೆಮುಡಿ ಬಿಟ್ಟು ತಿರುಗುವವರು ಗಾವಿಲರು. ಹಿಡಿದಿರುವ ಕೆಲಸ ಮುಟ್ಟುವವರೆಗೆ ಬಿಡದಿಂದ ಸಾಧನೆಗೈದು ಶಿವನ ಒಲುಮೆಗೆ ಪಾತ್ರಳಾಗಬೇಕೆಂಬ ಭಾಷೆ ಕೈಗೊಂಡಿದ್ದಾರೆ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೦, ವ. ೬೪೧

ಮಾತಿನಲ್ಲಿ ಕೇವಲ ವೇಷಧಾರಿಗಳು ಭಕ್ತರಂತೆ ಸೋಗುಹಾಕಿ ತಿರುಗುತ್ತಾರೆ. ಇಂಥವರನ್ನು ಕೆರದ ಅಟ್ಟೆಯಲ್ಲಿ ಹೊಡೆಯದೆ ಬಿಡುವುದಿಲ್ಲ ಘನಮಹಿಮರು ಎಂದಿದ್ದಾರೆ. ವೇಷಧಾರಿಗಳೆಲ್ಲಾ ಮೃಡನ (ಶಿವನ, ಲಿಂಗದ) ಅರಿವನ್ನು ಪಡೆಯಲಾರರು. ಸಾಧನೆಗೈಯುವ ಭಾಷೆಕೈಗೊಂಡು ಅದರಂತೆ ನಡೆಯುವ ಛಲದವರಿಗೆ ಮಾತ್ರ ಲಿಂಗದ ಅರಿವು ಸಾಧ್ಯ.

"ಗುರುವೆಂಬನೆ ಗುರುವು ನರನು;
ಲಿಂಗವೆಂಬನೆ, ಲಿಂಗವು ಕಲ್ಲು;
ಜಂಗಮವೆಂಬೆನೆ, ಜಂಗಮವು ಆತ್ಮನು;
ಪಾದೋದಕವೆಂಬೆನೆ, ಪಾದೋದಕ ನೀರು;
ಪ್ರಸಾದವೆಂಬೆನೆ, ಪ್ರಸಾದ ಓಗರ
ಇಂತೆಂದುದಾಗಿ
ಹೊನ್ನು ಹೆಣ್ಣು ಮಣ್ಣು ಈ ತ್ರಿವಿಧವ ಹಿಡಿದ ಕಾರಣ
ಗುರುವೆಂಬವನು ನರನು
ಅಷ್ಟವಿಧಾರ್ಚನೆ ಷೋಡಶೋಪಚಾರಕ್ಕೆ ಒಳಗಾದ ಕಾರಣ
ಲಿಂಗವೆಂಬುದು ಕಲ್ಲು
ಆಶೆಪಾಶೆಗೆ ಒಳಗಾದ ಕಾರಣ
ಜಂಗಮವೆಂಬುದು ಆತ್ಮನು
ಲಾಂಛನಿಗಳೆಂದು ಕಾಂಚನಕ್ಕೆ ಕೈಯಾನುವರಲ್ಲಿ
ಪಾದೋದಕ ಪ್ರಸಾದವೆಂದುಕೊಂಡೆನಾದಡೆ
ಕೆಸರಿನೊಳಗೆ ಬಿದ್ದ ಪಶುವಿನಂತೆ ಆಯಿತ್ತು ಕಾಣಾ
ಅಮುಗೇಶ್ವರಾ"[೧]

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳಿಗೆ ಅದರದೇ ಆದ ಮಹತ್ವವಿದೆ. "ಅರಿತು ಗುರುವಾದ, ನಿಂತು ಲಿಂಗವಾದ, ಚಲಿಸಿಜಂಗಮವಾದ" ಎಂಬಂತೆ ಗುರು–ಲಿಂಗ–ಜಂಗಮ ಮೂರು ಪರಶಿವನು ತಳೆದ ಮುರು ಮುಖಗಳು. ಗುರು ತನ್ನರಿವಿನ ಹಾದಿ ಬಿಟ್ಟು ಹೊನ್ನು ಹೆಣ್ಣು ಮಣ್ಣಿಗಾಗಿ ಆಸೆಪಟ್ಟರೆ ಆತ ಗುರುವಲ್ಲ ನರನಾಗುತ್ತಾನೆ. ಲಿಂಗವು ಬ್ರಹ್ಮಾಂಡದ ಕುರುಹು ಆಗಿರುವಂತೆ ಪಿಂಡಾಂಡದ ಸಂಕೇತವೂ ಆಗಿದೆ. ಅಂತರ್ಭಾವದಲ್ಲಿ ನಾವು ಸಾಧನೆಯಿಂದ ಲಿಂಗಾಂಗಿಗಳಾಗಬೇಕು. ಅದಾಗದೆ ಸ್ಥಾವರಲಿಂಗ ಅರ್ಚನೆ, ಪೂಜೆ, ಷೋಡಶೋಪಚಾರಕ್ಕೆ ಒಳಗಾದ ಕಾರಣ ಈ ಲಿಂಗ ಲಿಂಗವಲ್ಲ ಕಲ್ಲು. ಜಂಗಮ ಭವದ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೧, ವ. ೬೪೨.

ಲೌಕಿಕಾಂಕ್ಷೆಗಳಿಂದ ಮುಕ್ತನಾಗಿರಬೇಕು. ಜಂಗಮವೆಂದರೆ ಅನುಭವದ ತುತ್ತತುದಿಗೇರಿದ ಆಧ್ಯಾತ್ಮಿಕ ನಿಲುವು. ಈತ ಲೌಕಿಕ ಆಸೆವಾಂಛೆಗಳಿಗೆ ಒಳಗಾದರೆ ಕೇವಲ ಆತ್ಮವಿರುವ ಮನುಷ್ಯನೆನಿಸುತ್ತಾನೆ ಹೊರತು ಘನಮಹಿಮನಾಗನು. ನೀರು ಗುರುಕಾರುಣ್ಯದಿಂದ ಪಾದೋದಕ ಎನಿಸುತ್ತದೆ. ಓಗರ ಜಂಗಮಾರ್ಪಿತವಾದರೆ ಪ್ರಸಾದವೆನಿಸುತ್ತದೆ. ಲೌಕಿಕ ವಾಂಛನೆ ಬಿಡದೆ ಭವದ ತೊಳಲಾಟದಲ್ಲಿ ಸಿಲುಕಿದವರಲ್ಲಿ ಪಾದೋದಕ ಪ್ರಸಾದವನ್ನು ತಾನೆಂದೂ ಕೈಗೊಳ್ಳುವುದಿಲ್ಲ ಹಾಗೇನಾದರೂ ಆದರೆ ಕೆಸರಿನಲ್ಲಿ ಬಿದ್ದ ಪಶುವಿನಂತಾಗುತ್ತದೆಂದಿದ್ದಾರೆ.

"ಚಂದ್ರಸೂರ್ಯರಿಬ್ಬರೂ ಬಂಧನಕ್ಕೆ ಬಪ್ಪುದ ಕಂಡೆ
ಬ್ರಹ್ಮವಿಷ್ಣು ಭವಕ್ಕೆ ಗುರಿಯಾದುದ ಕಂಡೆ.
ದೇವದಾನವ ಮಾನವರು ಮಾಯಾಯೋನಿ ಮುಖವಾದುದ ಕಂಡೆ,
ಬಟ್ಟ ಬಯಲಲ್ಲಿ ನಿಂದು ನಿಮ್ಮ ಮುಟ್ಟಿದೆನಯ್ಯಾ ಅಮುಗೇಶ್ವರಾ"[೧]

ಅರಿವೇ ಸೂರ್ಯ, ಚಲನೆಯೇ ಚಂದ್ರ, ಒಂದು ಜ್ಞಾನವಾದರೆ ಮತ್ತೊಂದು ಸುಜ್ಞಾನ. ಇವೆರಡೂ ಭಕ್ತಿಯೆಂಬ ಬಂಧನಕ್ಕೆ, ಬದ್ಧತೆಗೆ ಒಳಗಾಗಿ ನಡೆಯುತ್ತಿವೆ. ಬ್ರಹ್ಮ, ವಿಷ್ಣುಗಳು ಅವತಾರವೆತ್ತು ಭವದ ಪಾಶಕ್ಕೆ ಒಳಗಾದರು. ದೇವದಾನವ, ಮಾನವರೆಲ್ಲಾ ಅರಿವನ್ನು ಕಡೆಗಣಿಸಿ, ಕಾಮವಿಕಾರಕ್ಕೆ ಒಳಗಾಗಿ ಕಾಯಕೆಡಿಸಿಕೊಂಡು ಮಾಯಾ ಯೋನಿಯ ಬೆನ್ನು ಹತ್ತಿದರು. ಬಟ್ಟ ಬಯಲಿನಲ್ಲಿ ಶಿವನೆಂಬ ಲಿಂಗತತ್ವವ ಅರಿತು ನಿಂತು ಬೆಳಕಲ್ಲಿ ತಾನು ಬೆಳಕಾದೆ, ಬಯಲಲ್ಲಿ ತಾನು ಬಯಲಾದ ಅನುಭಾವವನ್ನು ಹೇಳಿದ್ದಾರೆ.

"ದೇಹವಿಲ್ಲದೆ ಸುಳಿಯಬಲ್ಲಡೆ ಲಿಂಗೈಕ್ಯನೆಂಬೆನು
ಭಾವವಿಲ್ಲದೆ ಭ್ರಮಿತನಾಗಬಲ್ಲಡೆ ನಿರ್ಲೇಪಿಯೆಂಬೆನು
ಬಂದ ಬಂದ ಭೇದವನರಿತು
ಲಿಂಗಾರ್ಪಿತವ ಮಾಡಬಲ್ಲಡೆ ಲಿಂಗೈಕ್ಯನೆಂಬೆನು
ಅಮುಗೇಶ್ವರಲಿಂಗವನರಿದ ಆರೂಢನೆಂಬೆನು"[೨]

ದೇಹದಲ್ಲಿರುವ ಅಷ್ಟಮದಗಳು, ಅರಿಷಡ್ವರ್ಗಗಳೆಲ್ಲಾ ಅಳಿದಾಗ ಆತನ ಸರ್ವಾಂಗವೂ ಲಿಂಗಾಂಗವಾದರೆ ಆತನೇ ಲಿಂಗೈಕ್ಯನೆನ್ನುತ್ತಾರೆ. ಅಂತರಂಗದ ಭಾವವೆಲ್ಲಾ ನಿರ್ಭಾವವಾಗಿ ಭ್ರಮೆ ಹೋಗಲಾಡಿಸದವನಾಗಬೇಕು. ತಾನು ದುಡಿದ ಸತ್ಯಶುದ್ಧಕಾಯಕದಿಂದ ಬಂದಿದುದರಲ್ಲಿ ಲಿಂಗಾರ್ಪಿತ ಮಾಡಿದವನೇ ನಿಜಲಿಂಗೈಕ್ಯ. ಅವನನ್ನು ಅರಿದವನೇ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೧, ವ. ೬೪೩.
೨. ಅದೇ., ಪು. ೨೦೩, ವ. ೬೫೦.

ಆರೂಢನಾಗುತ್ತಾನೆ. ಆತ್ಮ ಪರಮಾತ್ಮನಿಗೂ ಭೇದವಿಲ್ಲ. ಎರಡೂ ಒಂದೇ ಸದಾಶಿವನೇ ತಾನು ಎಂದು ಅರಿತವನೇ ನಿತ್ಯನೆನಿಸುತ್ತಾನೆ.

"ನಾನೆಕರ್ತನೆಂದು ಹಾಡಿದೆನು ವಚನವ
ನಾನೇ ನಿತ್ಯನೆಂದು ಕಟ್ಟಿದೆನು ಬಿರಿದ
ನಾನನಿರವಯಸ್ಥಲದಲ್ಲಿ ನಿಂದು ಓದಿದೆನುವಚನವ
ನಾ ಓದಿದುದೆಲ್ಲ ನೀ ಓದಿದುದು
ನಾ ಕಟ್ಟಿದ ಬಿರಿದು ನಿನ್ನ ಬಿರಿದು.
ನಾನರಿದ ಅರಿವೆಲ್ಲಾ ನಿನ್ನರಿವು
ನಾ ಕಟ್ಟಿದ ಬಿರಿದಿಂಗೆ ಹಿಂದೆಗೆವನಲ್ಲ
ಅಮುಗೇಶ್ವರಲಿಂಗಕ್ಕೂ ಎನಗೂ ಪ್ರಭುದೇವರೆ ಗುರುವಲ್ಲದೆ
ಈರೇಳು ಲೋಕ ಹದಿನಾಲ್ಕು ಭುವನದಲ್ಲಿ ಆರನೂ ಕಾಣೆ"[೧]

ಅಮುಗೆರಾಯಮ್ಮನ ಅನುಭಾವದ ತುತ್ತತುದಿಯ ಅನಾವರಣ ಈ ವಚನದಲ್ಲಿದೆ. ತಾನೇ ಕರ್ತ, ತಾನೇ ನಿತ್ಯಳೆನ್ನುತ್ತಾಳೆ. ತಾನು ನಿರವಯಸ್ಥಲದಲ್ಲಿ ನಿಂತು ಅದ್ಯರ ವಚನಂಗಳ ಓದಿರುವುದಾಗಿ ಆ ಓದು ದೇವರನ್ನು ನೀನೇ ಓದಿರುವಂತೆ ನಾ ಕಟ್ಟಿದ ಬಿರಿದು ಅಂದರೆ ಅರಿವು ದೇವರನ್ನು ಸಾಕ್ಷಾತ್ಕಾರಗೊಳಿಸಿಕೊಂಡಿದ್ದು ನಿನ್ನ ಬಿರಿದೇ, ನಿನ್ನ ಅರಿವೇ, ಆ ಬಿರಿದ ಸಾಧಿಸಲು ಎಂದಿಗೂ ಹಿಂದೆದೆಗೆದವಳಲ್ಲ. ಲಿಂಗಕ್ಕೂ ನನಗೂ ಪ್ರಭುದೇವರೆ ಗುರು ಎಂದಿದ್ದಾರೆ.

"ನಾನೆ ಗುರುವಾದ ಬಳಿಕ ಇನ್ನಾರ ನೆನೆವೆನಯ್ಯಾ?
ನಾನೇ ಲಿಂಗವಾದ ಬಳಿಕ ಇನ್ನಾರ ನೆನೆವೆನಯ್ಯಾ?
ನಾನೇ ಜಂಗಮನಾದ ಬಳಿಕ ಇನ್ನಾರ ನೆನೆವೆನಯ್ಯಾ
ಎನಗೆ ಗುರುವಾದಾತನು ನೀನೇ ಎನಗೆ ಲಿಂಗವಾದಾತನು ನೀನೆ,
ಎನಗೆ ಜಂಗಮವಾದಾತನು ನೀನೆ,
ಎನಗೆ ಪಾದೋದಕ ಪ್ರಸಾದವಾದಾತನು ನೀನೆ
ಅಮುಗೇಶ್ವರಲಿಂಗವಾಗಿ ಎನ್ನ ಕರಸ್ಥಲಕ್ಕೆ ಬಂದಾತನು ನೀನೇ ಪ್ರಭುವೇ"[೨]

ಅನುಭಾವದ ಆಧ್ಯಾತ್ಮಿಕ ಅಂತರಂಗದ ನಿಲುವಿದೆ. ಗುರುಕಾರುಣ್ಯದಿಂದ ತಾನೇ ಗುರು, ಲಿಂಗ, ಜಂಗಮದ ಸ್ಥಿತಿಗೆ ಏರಿರುವುದರಿಂದ ಮತ್ತಾರನ್ನೂ ನೆನೆಯಬೇಕಿಲ್ಲ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೪, ವ. ೬೫೩.
೨. ಅದೇ., ಪು. ೨೦೪, ವ. ೬೫೪.

ಗುರುವೂ ನೀನೆ, ಲಿಂಗವೂ ನೀನೆ, ಜಂಗಮನೂ ನೀನೆ, ಪಾದೋದಕ ಪ್ರಸಾದವೂ ನೀನೆ, ನೀನೇ ನನ್ನ ಕರಸ್ಥಲದಲ್ಲಿ ಬಂದು ನೆಲೆಸಿರುವಾಗ ಮತ್ತಾರನ್ನೂ ನೆನೆಯೆನು, ಅದನ್ನು ಗುರು ಪ್ರಭುವಿನ ಸಾಕಾರದಿಂದ ಅರಿತೆನು. ಅಂತರಂಗದ ಬೆಳಕನ್ನು ತೋರಿಸುವವನೇ ಗುರು. ಶಿವಪಥವನ್ನು ಅರಿಯಬೇಕಾದರೆ ಗುರುಪಥಮೊದಲು ಬೇಕು. ಆ ಗುರುವಿನ ಮಾರ್ಗದರ್ಶನದಿಂದ ಸ್ವಯಂ ಲಿಂಗವಾದ ಪರಿಯನ್ನು ರಾಯಮ್ಮ ತಿಳಿಸಿದ್ದಾರೆ.

"ನಾನೇ ಗುರುವಾದ ಬಳಿಕ ಗುರುವೆಂಬುದಿಲ್ಲ
ನಾನೇ ಲಿಂಗವಾದ ಬಳಿಕ ಲಿಂಗವೆಂಬುದಿಲ್ಲ,
ನಾನೇ ಜಂಗಮವಾದ ಬಳಿಕ ಜಂಗಮವೆಂಬುದಿಲ್ಲ,
ನಾನೇ ಪ್ರಸಾದವಾದ ಬಳಿಕ ಪ್ರಸಾದವೆಂಬುದಿಲ್ಲ,
ಅಮುಗೇಶ್ವರನೆಂಬ ಲಿಂಗವು ತಾನೆಯಾದ ಬಳಿಕ
ಲಿಂಗವನರಿದೆನೆಂಬ ಹಂಗಿನವನಲ್ಲ."[೧]

ಇಲ್ಲಿಯೂ ತಾನೇ ಸ್ವಯಂ ಲಿಂಗವಾದ ಅನುಭಾವದ ನಿಲುವಿದೆ. ಗುರುವಾದವನು ಶಿಷ್ಯನನ್ನು ತನ್ನಂತೇ ಮಾಡುತ್ತಾನೆ. ಆತನೇ ಗುರು ಇಲ್ಲಿ ರಾಯಮ್ಮ ತಾನೇ ಗುರು–ಲಿಂಗ–ಜಂಗಮ–ಪ್ರಸಾದಿಯಾದ ಅನುಭಾವವನ್ನು ತಿಳಿಸುತ್ತಾ ಅಬೇಧ ಸ್ಥಿತಿಯನ್ನು ತಿಳಿಸಿದ್ದಾರೆ. ಭಕ್ತರ ಅಂತರಂಗ ಪರೀಕ್ಷಿಸುವ ಜಂಗಮಳೂ ತಾನಾದ ಮೇಲೆ ಜಡೆಧಾರಿ ಜಂಗಮರ ಅಗತ್ಯವಿಲ್ಲ ಎನ್ನುವಲ್ಲಿ ಅರಿವೇ ಗುರು, ಅರಿವೇ ಜ್ಯೋತಿರ್ಲಿಂಗ ಎಂಬ ಅಂತರಾರ್ಥ ಹೊಳೆಯುತ್ತದೆ.

"ನಿತ್ಯನಾಗಿ ಇಷ್ಟಲಿಂಗವನ್ನಪ್ಪಿದ ಶರಣನಿರವ
ಭ್ರಷ್ಟಭವಿಗಳೆತ್ತ ಬಲ್ಲರೋ?
ನೆಟ್ಟನೆನಿಂದು ಮುಟ್ಟಿದೆನು ಶಿವನ ಪಾದವ
ಎನ್ನಲಿ ಕೆಟ್ಟಗುಣ ಹೊದ್ದಲಿಲ್ಲವೆಂದು
ಮುಟ್ಟಿದೆನು ಎನ್ನ ಇಷ್ಟಲಿಂಗವ.
ಕೆಟ್ಟ ಭವಭಾರಿಗಳ ಕಂಡಡೆ
ಭ್ರಷ್ಟರೆಂದು ನಿಮ್ಮನಪ್ಪಿಕೊಂಬೆನು ಅಮುಗೇಶ್ವರಾ"[೨]

ಇಷ್ಟಲಿಂಗದ ಮೂಲಕ ತಾನೇ ಸಾಧನೆಗೈದು ನಿತ್ಯನಾಗಿರುವ ಮಹಾಘನಶರಣರ ನಿಲುವನ್ನು ಭ್ರಷ್ಟಭವಿಗಳು ಕಾಣಲು ಸಾಧ್ಯವಿಲ್ಲ. ಮನಸ್ಸಿನ ಕೆಟ್ಟ ಗುಣಗಳೆಲ್ಲಾ ಕಳೆದು

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೪, ವ. ೬೫೫.
೨. ಅದೇ., ಪು. ೨೦೫, ವ. ೬೫೭.

ಆಚಾರಶೀಲವಂತನಾಗಿ ಶಿವನ ಪಾದವ ಮುಟ್ಟಲು ಸಾಧ್ಯ. ಹುಟ್ಟು ಸಾವೆಂಬ ಭವದ ಬಂಧನದಲ್ಲೇ ತೊಳಲಾಡುವ ಭ್ರಷ್ಟರಿವರು. ಇವರು ಶಿವತತ್ವ ಕಾಣಲಾರರು. ಆ ಘನ ಮಹಿಮನ ಅರಿವು ಅಷ್ಟು ಸುಲಭವಲ್ಲ, ತನು, ಮನ, ಧನ, ಶುದ್ಧವಾಗಿ ಅರ್ಪಿತಗೊಂಡಾಗಲೇ ಮೃಡನ ಅರಿಯಲು ಸಾಧ್ಯ ಎಂದಿದ್ದಾರೆ.

"ನಿರವಯಸ್ಥಲದಲ್ಲಿ ನಿಂದ ಬಳಿಕ
ಹೊನ್ನ ಹಿಡಿಯೆನೆಂಬ ಭಾಷೆ ಎನಗೆ
ಹೆಣ್ಣು, ಹೊನ್ನು, ಮಣ್ಣು ಹಿಡಿದು ಲಿಂಗೈಕ್ಯನಾದೆನೆಂದಡೆ
ಎನ್ನ ಅಂಗದ ಮೇಲೆ ಲಿಂಗವಿಲ್ಲ
ಪಟ್ಟೆ ಮಂಚ ಹಚ್ಚಡ ಬಂದಡೆ ದಿಟ್ಟಿಸಿ ನೋಡೆ
ಸಣ್ಣ ಬಣ್ಣಗಳು ಬಂದಡೆ ಕಣ್ಣೆತ್ತಿ ನೋಡೆನೆಂಬ ಭಾಷೆ ಎನಗೆ
ಎನ್ನಲಿಂಗಕ್ಕೆ ಸಜ್ಜೆ ಶಿವದಾರವ
ಬಾಯೆತ್ತಿ ಭಕ್ತ ಜಂಗಮವ ಬೇಡಿದೆನಾದಡೆ,
ಎನ್ನ ಅರುವಿಂಗೆ ಭಂಗ ನೋಡಾ
ಬಸವಣ್ಣ ಸಾಕ್ಷಿಯಾಗಿ ಪ್ರಭುವಿಗರಿಕೆಯಾಗಿ
ಪ್ರಭುದೇವರ ಕಂಡು ಕೈಯಲ್ಲಿ ಕಟ್ಟಿದ ಬಿರಿದಿಂಗೆ ಹಿಂದೆಗೆದೆನಾದಡೆ
ಎನಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ,
ಪಾದೋದಕ ಪ್ರಸಾದವೆಂಬುದು ಎಂದೆಂದಿಗೂ ಇಲ್ಲ.
ಅಮುಗೇಶ್ವರನೆಂಬ ಲಿಂಗವು ಸ್ವಪ್ನದಲ್ಲಿ ಸುಳಿಯಲಿಲ್ಲ".[೧]

ಬಯಲಾದ ಸ್ಥಿತಿಯನ್ನು ತಲುಪಿದವರು ಹೊನ್ನು, ಹೆಣ್ಣು, ಮಣ್ಣಿಗಾಗಿ ಆಸೆ ಪಡುವುದಿಲ್ಲ. ಅವುಗಳ ಬೆನ್ನಹತ್ತಿದವನಿಗೆ ಅಂಗದ ಮೇಲೆ ಲಿಂಗವಿಲ್ಲ. ಪಟೆ, ಮಂಚ, ಹಚ್ಚಡಗಳನ್ನೂ ನೋಡಬಾರದು. ಲಿಂಗಕ್ಕೆ ಬೇಕಾದ ಸಜ್ಜೆ ಶಿವದಾರವನ್ನು ಅನ್ಯರಲ್ಲಿ ಬೇಡಬಾರದು. ಬೇಡಿದೆನಾದರೆ ತನ್ನ ಅರಿವಿಗೆ ಭಂಗ. ತನ್ನ ಸತ್ಯಶುದ್ಧ ಕಾಯಕದಿಂದ ತಂದುದರಲ್ಲಿ ಸೇವೆಗೈಯ್ಯಬೇಕು. ಈ ರೀತಿಯ ಬಿರಿದ ಕಟ್ಟಿ ಅದರಂತೆ ಸತ್ಯಶುದ್ಧವಾಗಿ ನಡೆದುಕೊಳ್ಳಬೇಕು. ಆ ಬಿರಿದಿಗೆ ಕಟ್ಟುಬದ್ಧಕ್ಕೆ ಒಳಗಾಗದವನಿಗೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದದ ಅರಿವು ಎಂದಿಗೂ ಸಿಗುವುದಿಲ್ಲ. ಲಿಂಗ ಕನಸಿನಲ್ಲೂ ಸುಳಿಯುವುದಿಲ್ಲವೆಂದಿದ್ದಾರೆ.

"ನೀರೊಳಗೆ ಹೋದವನ ಹೆಜ್ಜೆಯ ಕಾಬವರುಂಟೇ?
ಅಂದಳವನೇರಿದ ಆತ್ಮನ ಹೆಜ್ಜೆಯ ಕಾಬವರುಂಟೇ?

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೫, ವ. ೬೫೯.

ಆನೆಯನೇರಿಕೊಂಡು ಅರಿವನರಸುವನಂತೆ
ಜ್ಞಾನಿಗಳ ಸಂಗದಲ್ಲಿರ್ದು ಆತ್ಮತೇಜಕ್ಕೆ ಹೊರುವನಂತೆ
ನಾನು ನೀನೆಂಬುದನಳಿದು ತಾನೆಯಾಗಿರಬಲ್ಲಡೆ
ಅಮುಗೇಶ್ವರಾ ಲಿಂಗವು ತಾನೇ ಎಂಬೆನು".[೧]

ನೀರೊಳಗೆ ನಡೆಯುವವನ ಹೆಜ್ಜೆ ಮತ್ತು ಪಲ್ಲಕ್ಕಿಯಂತಿರುವ ದೇಹವನೇರಿದ ಆತ್ಮದ ಅರಿವಿನ ಹೆಜ್ಜೆ ಕಾಣಲು ಸಾಧ್ಯವಿಲ್ಲ. ಆನೆಯನೇರಿ ಅರಿವನ್ನು ಹುಡುಕಿದರೂ ಸಿಗದು ಜ್ಞಾನಿಗಳ ಸಂಗದಲ್ಲೇ ಇದ್ದರೂ ಆತ್ಮದ ಅರಿವಿಗೆ ಹೋರಾಡಬಾರದು. ನಾನು ನೀನು ಶಿವನೇ ಬೇರೆ ಆತ್ಮವೇ ಬೇರೆ ಎಂಬುದು ಅಳಿದು ತಾನೇ ಶಿವನೆಂದು, ತಾನೇ ಲಿಂಗವೆಂದು ಅರಿತಿರುವುದಾಗಿ ರಾಯಮ್ಮ ಹೇಳಿದ್ದಾರೆ. ಆ ಅರಿವು ಅಷ್ಟು ಸುಲಭವಲ್ಲ. ನೀರಿನೊಳಗಿನ ಹೆಜ್ಜೆ ಆತ್ಮದ ಹೆಜ್ಜೆಯನ್ನು ಅರಿಯಲು ಶರಣರಂಥ ಜ್ಞಾನಿಗಳ ಸಂಗದಿಂದ ಮಾತ್ರ ಸಾಧ್ಯ. ಆಗ ಎರಡೆಂಬುದು ಅಳಿದು ತಾನೇ ದೇವರಾಗುವ ಪರಿಯನ್ನು ರಾಯಮ್ಮ ಚಿತ್ರಿಸಿದ್ದಾರೆ.

"ಭಾವವಿಲ್ಲದ ಬಯಲೊಳಗೆ ಮನೆಯ ಮಾಡಿದಡೆ
ಬೆಟ್ಟಬೆಟ್ಟಕ್ಕೆ ಜಗಳ ಬಂದು ಕಿಚ್ಚು ಹತ್ತಿತ್ತು.
ಭಾವವಿಲ್ಲದ ಬಯಲೊಳಗೂ ಮನೆ ಬೆಂದಿತ್ತು.
ಅಮುಗೇಶ್ವರನೆಂಬ ಲಿಂಗವರಿಯಬಂದಿತ್ತು"[೨]

ಅಂತರಂಗದ ಭಾವವೆಲ್ಲಾ ಕಳೆದು ನಿರ್ಭಾವವಾಗಬೇಕು. ಮನಸ್ಸಿನ ಕಾಮನೆ, ಆಸೆ, ಆಕಾಂಕ್ಷೆಯೆಲ್ಲಾ ಅಳಿದು ಮನಸ್ಸು ಬಯಲಾಗಿ ಶೂನ್ಯವಾದಾಗ ಅಲ್ಲಿ ಮನೆಯ ಭಗವಂತನ ಇರುವಿನ ಮನೆಯ ಮಾಡಿದಾಗ ಅರಿತಾಗ, ತಿಳಿದಾಗ ಆ ಮನಸ್ಸಿನಲ್ಲಿರುವ ಕಾಮನೆ, ವಿಕಾರ, ಅರಿಷಡ್ವರ್ಗ, ಪಂಚೇಂದ್ರಿಯಗಳೆಂಬ ಬೆಟ್ಟಗಳಿಗೆ ಜಗಳ ಹತ್ತಿ ಕಿಚ್ಚಿನಲ್ಲಿ ಭಸ್ಮವಾದವು. ಭಾವವಿಲ್ಲದ ಆ ಬಯಲಿನಲ್ಲಿ ಅಂತರಾತ್ಮವೆಂಬ ಮನೆ ಬೆಂದು ಲಿಂಗದ ಅರಿವಾಯಿತು ಎಂಬ ಅನುಭಾವಿಕ ನೆಲೆಯನ್ನು ಪ್ರಸ್ತುಪಡಿಸಿರುತ್ತಾರೆ.

"ಮುಂಡವ ಬಿಟ್ಟು ತಲೆಯಲ್ಲಿ ನಡೆವ
ತತ್ವಜ್ಞಾನಿಗಳ ತೋರಿಸಯ್ಯಾ,
ಬೀದಿಯಲ್ಲಿ ಸುಳಿಯುವ
ಬಿಸಿಲಕುದುರೆಯ ಏರಬಲ್ಲಡೆ, ಕಡುಗಲಿ ಎಂಬೆನು,

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೬, ವ. ೬೬೨.
೨. ಅದೇ., ಪು. ೨೦೯, ವ. ೬೭೧.

ಮೃಡನ ಅರಿಯಬಲ್ಲಡೆ, ಪೊಡವಿಗೆ ಒಡೆಯರೆಂಬೆನು
ಅಮುಗೇಶ್ವರ ಲಿಂಗಕ್ಕೆ ಅತ್ತಲಾದವರೆಂಬೆನು."[೧]

ಶಿವತತ್ವವನ್ನು ಅರಿತವರು ತಲೆಯಲ್ಲಿ ನಡೆಯುವವರು. ಆಚಾರ, ನೀತಿವಂತರು, ಭಗವಂತನ ನಿಲುವನ್ನು ಅರಿತು ಆಚರಿಸಿ, ಸದಾಚಾರ, ಸದ್ಭಕ್ತಿಯೆಂಬ ತಲೆಯಲ್ಲಿ ನಡೆಯುವವರು ಶಿವಪಥದ ಬೀದಿಯಲ್ಲಿ ಸುಳಿಯುವ ಬಿಸಿಲಕುದುರೆಯಂತಿರುವ ಲಿಂಗದರಿವು ಏರಿದರೆ ಆತನೆ ಕಡುಗಲಿ. ಶಿವನನ್ನು ಅರಿತವನೆ ಮನಸ್ಸೆಂಬ, ದೇಹವೆಂಬ ಪೊಡವಿಗೆ ಒಡೆಯ. ಆತನೇ ಅಮುಗೇಶ್ವರಾ ಲಿಂಗವನ್ನು ಅರಿತವನೆಂದಿದ್ದಾರೆ.

"ಮೊತ್ತದ ಮಾಮರ ಉರಿಯಿತ್ತ ಕಂಡೆ,
ಉಪ್ಪರಿಗೆ ಬೆಂದು ಕರ್ಪೂರವಾದುದ ಕಂಡೆ.
ಬೆಟ್ಟಸುಟ್ಟು ಸರ್ಪನ ಶಿರಹರಿದುದ ಕಂಡೆ.
ನೋಡಿನೋಡಿ ನಿಮ್ಮ ಕೂಡಿಕೊಂಡೆನಯ್ಯಾ ಅಮುಗೇಶ್ವರಾ"[೨]

ದೇಹದಲ್ಲಿರುವ ಅಷ್ಟಮದ, ಅರಿಷಡ್ವರ್ಗ, ಕಾಮ ವಿಕಾರಗಳು ಎಲ್ಲಾ ಮೊತ್ತಗಳ ಮರಕ್ಕೆ ಶಿವಜ್ಞಾನದಿಂದ ಉರಿಯನ್ನು ಇಟ್ಟೆ. ಜ್ಯೋತಿಯಲ್ಲಿ ತಾನೂ ಜ್ಯೋತಿಯಾದೆ. ಆಧ್ಯಾತ್ಮಿಕ ನಿಲುವನ್ನು ಕಂಡೆ. ಕುಂಡಲಿನಿ ಎಂಬ ಸರ್ಪವ ಊರ್ಧ್ವಮುಖವಾಗಿ ಚಲಿಸಿ ಆಧ್ಯಾತ್ಮಿಕ ಶಿಖರಕ್ಕೇರಿದೆ. ಆ ಆನಂದವನ್ನು ನೋಡಿ ನೋಡಿ ನಿಮ್ಮನ್ನು ಕೂಡಿಕೊಂಡಿರುವೆ ಎಂದಿದ್ದಾರೆ.

"ವಿಶ್ವಮಯರೂಪವಾಗಿ ಬಂದೆನಯ್ಯಾ,
ಭಕ್ತಿಗೆ ಎನ್ನ ಮನಕ್ಕೆ ಸಲೆನಿಂದ ನಿಲುವು
ಅಮುಗೇಶ್ವರಲಿಂಗಕ್ಕೆ ಮಾಟವಾಯಿತ್ತು"[೩]

ಭಗವಂತ ಯಾವುದೇ ಕಲ್ಲು, ಮಣ್ಣು, ಗಿಡಮರದ ಶಿಲೆಗಳ, ರೂಪವಿಲ್ಲ. ಬ್ರಹ್ಮಾಂಡ, ಪಿಂಡಾಂಡದ ಸಂಕೇತವಾದ ವಿಶ್ವಮಯವೇ ರೂಪ ತಳೆದು ಈ ಕರಸ್ಥಲದಲ್ಲಿ ಬಂದು ನೆಲೆಸಿದೆ. ಭಕ್ತಿಗೆ ಮನಸ್ಸನ್ನೂ ಸಿಲುಕಿಸಿ ಆ ನಿಲುವಿನಲ್ಲಿ ನಾವು ಈ ರೂಪು ಭಗವಂತನೆಂಬ ಲಿಂಗದರಿವು ಪಡೆದು ತಾನೇ ಲಿಂಗವಾಗುವ ಪರಿಯನ್ನು ತಿಳಿಸಿರುತ್ತಾರೆ.

"ಸಮಯದೊಡನೆ ಸುಳಿದಾಡುವೆನೆಂಬ ಭಾವದ ಭ್ರಮೆಯವನಲ್ಲ.
ಆತ್ಮತೇಜಕ್ಕೆ ಹರಿದಾಡುವೆನೆಂಬ ಭ್ರಾಂತಿನ ಭ್ರಮೆಯವನಲ್ಲ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೧, ವ. ೬೮೦.
೨. ಅದೇ., ಪು. ೨೧೨, ವ. ೬೮೩.
೩. ಅದೇ., ಪು. ೨೧೨, ವ. ೬೮೬.

ಅಮುಗೇಶ್ವರನೆಂಬ ಲಿಂಗವನರಿದ ಬಳಿಕ
ನನ್ನವರು ತನ್ನವರು ಎಂಬ ಭ್ರಾಂತಿನವನಲ್ಲ".[೧]

ಲಿಂಗಾಂಗ ಸಾಮರಸ್ಯಕ್ಕೆ ಸಮಯದ, ಹೊತ್ತಿನ ಭಂಗವಿಲ್ಲ, ರಾಹುಕಾಲ, ಗುಳಿಕಾಲಗಳ ಜಂಜಡವಿಲ್ಲ, ಎಲ್ಲಾ ವೈದಿಕ ಆಚರಣೆಗಳನ್ನೂ ಅಲ್ಲಗಳೆದು ಆತ್ಮ ಸಾಕ್ಷಾತ್ಕಾರಕ್ಕೆ ಭ್ರಾಂತಿನ ಭ್ರಮೆ ಬೇಕಿಲ್ಲ. ದೇವರು ಒಲಿಯುತ್ತಾನೋ ಇಲ್ಲವೋ ಎಂಬ ಭ್ರಮೆ ಬೇಕಿಲ್ಲ. ನಾನು ಬೇರೆ ನೀನೇ ಬೇರೆ ಎಂಬ ಭ್ರಾಂತಿ ಬೇಕಿಲ್ಲ. ತನ್ನ ತಾನು ಅರಿತರೆ ತಾನೇ ದೈವ ಎಂದಿದ್ದಾರೆ.

"ಸರ್ವಸಂಬಂಧಿಯಾಗಿ ಸಮ್ಯಕ್‌ಜ್ಞಾನಿಯಾಗಿ ಅರಿವೆನು ಶಿವನ ಆದಿಯ
ಅಷ್ಟಮದಂಗಳ ಒತ್ತಿದೆನಾಗಿ ನೆಟ್ಟನೆ ನಿಲ್ಲುವೆನು
ಎನ್ನ ಅಂತರಂಗ ಬಹಿರಂಗ ಸರ್ವಾಂಗದಲ್ಲಿ ಕಳಂಕ ಇಲ್ಲವಾಗಿ
ಮುಟ್ಟುವೆನು ಅಮುಗೇಶ್ವರ ಲಿಂಗವ."[೨]

ಸಮ್ಯಕ್‌ಜ್ಞಾನಿ ಎಂದರೆ ಅನುಭಾವದ ಮೂಲಕ ಪಡೆದ ಜ್ಞಾನ. ಆತ್ಮ ಪರಶಿವನಲ್ಲಿ ಬೆರೆತು ತನ್ನ ವೈಯಕ್ತಿಕತೆಯನ್ನು ಕಳೆದುಕೊಂಡಾಗ ಶಿವನ ಆದಿಯನ್ನು ಅರಿಯಬಹುದು. ಅಷ್ಟಮದಗಳಾದ ಪೃಥ್ವಿಮದ, ಸಲಿಲಮದ, ಪಾವನಮದ, ಅಂಬರಮದ, ಸೂರ್ಯಮದ, ಚಂದ್ರ ಮತ್ತು ಆತ್ಮ ಎಂಬ ಅಷ್ಟಮದಗಳು ಬತ್ತಿದರೆ ಮಾತ್ರ ತನ್ನ ಸಾಧನೆಯ ಕಾರ್ಯದಲ್ಲಿ ನಿಲ್ಲುತ್ತಾನೆ. ಅಂತರಂಗ, ಬಹಿರಂಗವೆರಡರಲ್ಲೂ ಕಳಂಕ ಇಲ್ಲದಿದ್ದರೆ ಮಾತ್ರ ಲಿಂಗವ ಮುಟ್ಟಿ ತಾನೇ ಲಿಂಗವಾಗುತ್ತಾನೆಂದಿದ್ದಾರೆ.

"ಸುಳಿವ ಸುಳುಹು ಅಡಗಿತ್ತೆನಗೆ,
ಎನ್ನ ಕಂಗಳ ಕಾಮಕಳೆಯಿತ್ತು
ಅರಿದೆನೆಂಬ ಮನ ಅಡಗಿದುದ ಕಂಡು
ನನ್ನ ನಾನೇ ತಿಳಿದು ನೋಡಿ,
ಕಟ್ಟಿದೆನು ಕಾಮನ ಮೇಲೆ ಬಿರಿದ,
ಮಾಯಾಯೋನಿಗಳಲ್ಲಿ ಹುಟ್ಟಿದರೆಲ್ಲ
ನಿರ್ಮಾಯನೆಂಬ ಗಣೇಶ್ವರಗೆ ಸರಿಯಪ್ಪರೆ?
ಬ್ರಹ್ಮ ವಿಷ್ಣು ರುದ್ರರೆಲ್ಲರು ಮಾಯಾ ಕೋಳಾಹಳನೆಂಬ ಪ್ರಭುವಿಂಗೆ
ಸರಿಯಲ್ಲವೆಂದು ಕಟ್ಟಿದೆ ಕೈದುವ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೫, ವ. ೬೮೪
೨. ಅದೇ., ಪು. ೨೧೫, ವ. ೬೮೫

ಸರಿಯೆಂದು ನುಡಿವವರ ಪರಿಪರಿಯಲಿ ಮೆಟ್ಟಿ ನೀಳುವೆನು ಕಾಣಾ,
ಅಮುಗೇಶ್ವರ ಲಿಂಗಕ್ಕೆ ಅಧಿಕನಾದನಯ್ಯಾ ಪ್ರಭುದೇವರು."[೧]

ಮನದ ಮುಂದೆ ಸುಳಿದಾಡುವ ವಿಷಯೇಂದ್ರಿಯಗಳ ವ್ಯಸನವನ್ನು ಅಡಗಿಸಿಕೊಂಡಿರುವುದಾಗಿ ತಾಯಿರಾಯಮ್ಮ ತಿಳಿಸುತ್ತಾ ಕಂಗಳ ಕಾಮ, ಕಾಯವಿಕಾರ ಕಳೆದು, ತಿಳಿದೆ ಶಿವನಿಲುವ, ಅರಿದೆನೆಂಬ ಅಹಂಕಾರ ಬಿಟ್ಟು ತನ್ನನ್ನು ತಾನೇ ಅರಿದ ಪರಿಣಾಮ ಮನದ ಮುಂದಿನ ಕಾಮವಿಕಾರಕ್ಕೆ ಬಿರಿದ ಕಟ್ಟಿರುವುದಾಗಿ ತಿಳಿಸಿದ್ದಾರೆ. ಮಾಯಾಯೋನಿ ಅಂದರೆ ಅರಿಷಡ್ವರ್ಗಗಳಿಗೆ ಬಲಿಯಾಗಿ, ಕಾಮವಿಕಾರಕ್ಕೆ ಬಲಿಯಾದವರೆಲ್ಲ ನಿರ್ಮಾಯೆಯೆಂಬ ಗಣೇಶ್ವರನಿಗೆ ಸಮನಾಗಲಾರರು. ಬ್ರಹ್ಮವಿಷ್ಣು, ರುದ್ರರೆಲ್ಲಾ ಈ ಮಾಯಾಯೋನಿಗೆ ಒಳಗಾದವರೆ ಆಗಿರುತ್ತಾರೆ. ಇವರೆಲ್ಲಾ ಗುರು ಪ್ರಭುವಿಗೆ ಸಮಾನವಾಗಲಾರರು. ಸಮಾನರೆಂದು ನುಡಿದರೆ ಮೆಟ್ಟಿ ಸೀಳುವುದಾಗಿ ತಿಳಿಸಿ ಗುರು ಪ್ರಭುದೇವರೇ ಲಿಂಗಕ್ಕೂ ಅಧಿಕ ಘನಮಹಿಮನೆಂದಿದ್ದಾರೆ.

### ೩. ವಿರಕ್ತ

ಪ್ರಾಪಂಚಿಕ ಆಸೆಗಳನ್ನು ಸಂಪೂರ್ಣ ತೊರೆದವನೇ ವಿರಕ್ತನೆನಿಸುತ್ತಾನೆ. ಅಂದರೆ ಲೌಕಿಕಕ್ಕೂ ಸಾಂಸಾರಿಕ ಜೀವನಕ್ಕೂ ವಿಮುಕ್ತನಾಗುವುದು ಎಂದಲ್ಲ. ಸಂಸಾರದಲ್ಲಿ ಇದ್ದುಕೊಂಡೇ 'ನೀರಮೇಲಣ ತೆಪ್ಪದಂತೆ , ಸಮುದ್ರದೊಳಗಣ ಬೆಂಗುಂಡಿನಂತೆ' ಇರುವುದೇ ವಿರಕ್ತನೆನಿಸುತ್ತಾನೆ. ಪಂಚೇಂದ್ರಿಯಗಳನ್ನು ಗೆದ್ದು ಅಂಗಾಂಗವೆಲ್ಲಾ ಲಿಂಗಾಗವನ್ನಾಗಿ ಮಾರ್ಪಡಿಸಿಕೊಂಡಿರುತ್ತಾನೆ. ಪಂಚಾಚಾರತತ್ವಗಳಲ್ಲಿ ನಿರತನಾಗಿರುತ್ತಾನೆ. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭತ್ಯಾಚಾರಗಳಲ್ಲಿ ತೊಡಗಿದವನಾಗಿರುತ್ತಾನೆ.

ಲಿಂಗಾಚಾರವೆಂದರೆ – ಇಷ್ಟಲಿಂಗ ಆರಾಧನೆ, ಅನ್ಯದೈವಗಳಿಗೆ ಎರಗದಿರುವ ಭಾಷಿಕೈಗೊಳ್ಳುವುದು. ಸದಾಚಾರವೆಂದರೆ ನೀತಿ ಆಚರಣೆಗಳು, ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಪರಸತಿ, ಪರಧನ ಬಯಸಬೇಡವೆಂಬ ಆಚಾರಗಳು, ಶಿವಾಚಾರವೆಂದರೆ ಶಿವಭಕ್ತರನ್ನು ಅವರುಗಳ ಕಸುಬುಗಳ ಮೆಲೆ ಮೇಲುಕೀಳೆಂದು ಪರಿಭಾವಿಸದೆ ಸಮಾನವಾಗಿ ಕಾಣುವುದು. ಗಣಾಚಾರ ಶಿವಭಕ್ತರಿಗಾಗುವ ಅವಮಾನಗಳನ್ನು ತಡೆಯುವ ಆಚಾರ, ಭತ್ಯಾಚಾರ ವಿನಯಶೀಲನಾಗಿರಬೇಕೆಂಬ ಆಚರಣೆಗಳನ್ನು ಅನುಸರಿಸುವನೇ ವಿರಕ್ತನೆನಿಸುತ್ತಾನೆ. ಅಮುಗೆರಾಯಮ್ಮಳ ದೃಷ್ಟಿಯಲ್ಲಿ ವಿರಕ್ತನ, ವಿರಕ್ತಿಯ ಪರಿಯನ್ನು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೬, ವ. ೬೯

"ಗಡ್ಡ ಮಂಡೆಯ ಬೋಳಿಸಿಕೊಂಡವರೆಲ್ಲ ಕಬ್ಬಲಿಗರಮಕ್ಕಳೆಂಬೆ
ಬತ್ತಲೆ ಇಪ್ಪವರೆಲ್ಲ ಕುಂಚಿಗನ ಮಕ್ಕಳೆಂಬೆ.
ಪಟ್ಟಣಕ್ಕೆ ಹೋಗಿ ಹೆಸರ ಹೇಳುವ ಜಾತಿಕಾರನಂತೆ
ಅರ್ಥ ಅನುಭಾವವ ಬಲ್ಲೆನೆಂದು ಅಗಮ್ಯವ ಬೀರುವ
ಅಘೋರಿಗಳ ವಿರಕ್ತರೆನ್ನಬಹುದೇ? ಎನಲಾಗದು.
ವಚನದ ರಚನೆಯ ಅರಿದೆನೆಂಬ
ಅಹಂಕಾರವ ಮುಂದುಗೊಂಡು ತಿರುಗುವ
ಆತ್ಮತೇಜದ ಘಾತಕರ ವಿರಕ್ತರೆನಲಾಗದಯ್ಯ.
ವಿರಕ್ತನ ಪರಿಯ ಹೇಳೆಹೆನು ಕೇಳಿರಣ್ಣಾ;
ವಾಯುಬೀಸದುದಕದಂತಿರಬೇಕು;
ಅಂಬುಧಿಯೊಳಗೆ ಕುಂಭ ಮುಳುಗಿದಂತಿರಬೇಕು;
ದರಿದ್ರಗೆ ನಿಧಾನಸೇರಿದಂತಿರಬೇಕು;
ಕೂಹಿಲ್ಲದ ಮರುತನಂತಿರಬೇಕು;
ಹಿಂಡಿನಗಲಿದ ಮದಗಜ ಹಿಂಡಸೇರಿದಂತಿರಬೇಕು;
ಸಂದೇಹ ಸಂಕಲ್ಪ ಮುಂದುಗೊಳ್ಳದೆ ಇರಬೇಕು;
ಅಂಗಲಿಂಗಿಗಳಲ್ಲಿ ಲಿಂಗಾರ್ಪಿತಕ್ಕೆ ಹೋಗಿ
ಬಂದುದನತಿಗಳೆಯದಿರ್ದಡೆ ವಿರಕ್ತರೆಂಬೆನು.
ರೋಗರುಜಿನಂಗಳು ಬಂದಲ್ಲಿ ಕಿಂಕಲನಾಗದೆ ಇರಬಲ್ಲಡೆ
ಅಮುಗೇಶ್ವರ ಲಿಂಗವೆಂಬೆನು"[೧]

ಗಡ್ಡಮಂಡೆಯ ಬೋಳಿಸಿಕೊಂಡವರು, ಬತ್ತಲೆಯಿದ್ದು ಅಲೆಯುವವರು, ಜಾತಿಕಾರನಂತೆ ಅನುಭಾವಗೊತ್ತಿರುವಂತೆ ಅಹಂಕಾರದಿಂದ ಅಗಮ್ಯವ ಬೀರುವವರೆಲ್ಲಾ ವಿರಕ್ತರಾಗಲಾರದು. ಗಡ್ಡ ಮಂಡೆ ಬೋಳಿಸಿಕೊಂಡವರು ಅಂಬಿಗನಮಕ್ಕಳು. ಬತ್ತಲೆ ಇದ್ದ ಮಾತ್ರಕ್ಕೆ ಕಾಯವಿಕಾರ ಅಳಿಯದೆ, ಭಗವಂತನ ನಿಲುವನ್ನು ಹರಸುತ್ತಾ ಸಾಗುತ್ತಾರೆ. ತನು ಬೆತ್ತಲೆಯಾಗಿದ್ದಡೇನು, ಮನ ಬೆತ್ತಲೆಗೊಳಿಸಿಲ್ಲ ಇವರು ವಿರಕ್ತರಾಗಲಾರರು. ವಚನ ರಚಿನೆ ತನಗೂ ತಿಳಿದಿದೆ. ತಾನೂ ಅರಿವುಳ್ಳವನೆಂದು ಅಹಂಕಾರದಿಂದ ತಿರುಗುವವರಿಗೆ ವಿರಕ್ತ ಎನಲಾಗದು. ವಿರಕ್ತನೆಂದರೆ ವಾಯು ಬೀಸಿದ ಉದಕದಂತಿರಬೇಕು. ಅಂದರೆ ಗಾಳಿ ಇಲ್ಲದ ಮಳೆ ಭೂಮಿಗೆ ತಂಪೆರೆಯುವಂತೆ ದೇಹವೆಂಬ ಭೂಮಿಗೆ ಕಾಮವಿಕಾರವಿಲ್ಲದ ತಂಪಾಗಿರಬೇಕು. ಸಮುದ್ರದೊಳಗೆ ಕುಂಭ ಮುಳುಗಿದಂತೆ ಅಂದರೆ ಸಂಸಾರ, ಭವವೆಂಬ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೦, ವ. ೬೩೯.

ಸಮುದ್ರದಲ್ಲಿ ಕುಂಭ ಮುಳುಗಿದ್ದರೂ ಈ ಕಾಯ ತೊಳಗಾಗಿದ್ದರೂ ಬರೀ ಸಮುದ್ರ ಕಾಣುತ್ತದೆಯೋ ಹೊರತುಕುಂಭವಲ್ಲ. ದರಿದ್ರನಿಗೆ ನಿಧಾನ ಸಿಕ್ಕಂತೆ ಅಂದರೆ ಅಜ್ಞಾನವೆಂಬ ದರಿದ್ರನಿಗೆ ಶಿವತತ್ವ ಜ್ಞಾನವೆಂಬ ನಿಧಿ ಸಿಕ್ಕಾಗ ಆತನೂ ಘನಮಹಿಮನಾಗುತ್ತಾನೆ. ಹೀಗೆ ಸಂತಸ ಪಡುವಂತೆ ಒಂದುಉದಾಹರಣೆ ಸಹಿತ ಲಿಂಗಾಂಗ ಸಾಮರಸ್ಯ ವಿರಕ್ತನ ಬಗ್ಗೆ ವಿವರಿಸಿದ್ದಾರೆ.

"ದೇಶದೇಶವ ತಿರುಗಿ ಮಾತುಗಳ ಕಲಿತು,
ಗ್ರಾಸಕ್ಕೆ ತಿರುಗುವ ದಾಸಿವೇಶಿಯ ಮಕ್ಕಳ ವಿರಕ್ತರೆಂಬೆನೆ?
ತನುವಿನಲ್ಲಪ್ಪ ತಾಮಸವ ಕಳೆಯದೆ
ಕಾಬವರ ಕಂಡು ವಿರಕ್ತರೆಂದೆಡೆ
ಕುಂಭೀಪಾತಕ ನಾಯಕನರಕ ತಪ್ಪದು ಅಮುಗೇಶ್ವರಾ"[೧]

ದೇಶದೇಶವ ತಿರುಗಿ ಹಲವಾರು ಮಾತುಗಳ ಕಲಿತು, ಹೊಟ್ಟೆಹೊರೆಯುತ್ತಾ ತಿರುಗುವವರು ವಿರಕ್ತರಾಗಲಾರರು. ದೇಹದಲ್ಲಿನ ತಾಮಸ ಗುಣಗಳಾದ ಅಷ್ಟಮದ, ಅರಷಡ್ವರ್ಗ, ಕಾಮವಿಕಾರವನ್ನು ಕಳೆಯದೆ ತಿರುಗುವವರು ಎಂದಿಗೂ ವಿರಕ್ತರಾಗಲಾರರು. ಅವರನ್ನು ವಿರಕ್ತರೆಂದರೆ ನಾಯಕನರಕ, ಕುಂಭೀಪಾತಕ ಎಂದು ವಿಡಂಬಿಸಿರುತ್ತಾರೆ.

"ಬೆಟ್ಟದ ನೆಲ್ಲಿಯಕಾಯ ಪಟ್ಟಣಕ್ಕೆ ಹೊತ್ತುಕೊಂಡು ಹೋಗಿ
ಹೊಟ್ಟೆಯ ಹೊರೆವವನಂತೆ
ಉತ್ತಮ ತೇಜಯ ಹೆಸರಹೇಳಿ ಕಡಲೆಯ ತಿಂಬ ಗಾವಲಿಗನಂತೆ
ಅತ್ತೆಯ ಹೆಸರ ಹೇಳಿ ಹೊಟ್ಟೆಯ ಹೊರೆವ ತೊತ್ತಿನಂತೆ,
ಆದ್ಯರ ವಚನಂಗಳ ಅಲ್ಲಿಗಲ್ಲಿಗೆ ಉಸುರಿ
ಅನ್ನ ಕೂಳಿಂಗೆ ಹರಿದಾಡುವ ಅಜ್ಞಾನಿಗಳ
ಅನುಭಾವಿಗಳಂಬೆನೆ? ಅಯ್ಯಾ, ವಿರಕ್ತರೆಂಬೆನೆ?
ಮೇಷವ ಹೊತ್ತು ತಿರುಗುವ ಡೊಂಬನಂತೆ
ಬಲ್ಲೆ ಬಲ್ಲೆನೆಂಬ ಅಹಂಕಾರವ ನುಡಿವ ಭವಿಗಳ
ಅನುಭಾವಿಗಳೆಂಬೆನಲ್ಲದೆ ವಿರಕ್ತರೆಂಬೆನೇ?
ವಿಷಯವ ಮುಂದುಗೊಂಡು ತಿರುಗುವ ಅನುಭಾವಿಗಳನೆಂತು
ವಿರಕ್ತರೆಂಬೆನಯ್ಯಾ ಅಮುಗೇಶ್ವರಲಿಂಗವೆ?"[೨]

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೩, ವ. ೬೪೯.
೨. ಅದೇ., ಪು. ೨೦೮, ವ. ೬೬೯.

'ಉದರನಿಮಿತ್ತ ಬಹುಕೃತವೇಷಂ' ಬೆಟ್ಟದ ನೆಲ್ಲಿಕಾಯಕಿತ್ತುಕೊಂಡು ಹೋಗಿ ಹೊತ್ತು ಪಟ್ಟಣಕ್ಕೆ ಮಾರಿ ಹೊಟ್ಟೆಯನ್ನು ಹೊರುವವರಾಗುತ್ತಾರೆಯೇ ಹೊರತು, ಜ್ಞಾನವೆಂಬ ಅರಿವನ್ನು ಪಡೆಯಲಿಲ್ಲ. ಜ್ಞಾನದ ಹಸಿವನ್ನು ಹೋಗಲಾಡಿಸಿ- ಕೊಳ್ಳಲಾರರು. ಒಡಲ ಹಸಿವಿಗಾಗಿ ಹಾತೊರೆಯುವವರು, ಕುದುರೆಯ ಹೆಸರ ಹೇಳಿ ಕಡಲೆಯ ತಿನ್ನುವವರು, ಜ್ಞಾನವೆಂಬ ಕಡಲೆಯಲ್ಲ ಅದು. ಅತ್ತೆಯ ಹೆಸರ ಹೇಳಿ ಆಳಾದವನು ತನ್ನ ಒಡಲ ಹೊರುವಂತೆ, ವಚನಂಗಳ ಕಲಿತು ಆಚರಣೆಗೆ ತಾರದೆ ಅನ್ನ ಕೂಳಿಗಾಗಿ ಅಲ್ಲಲ್ಲಿ ತೆರಳಿ ಉಸುರುವವರನ್ನು ವಿರಕ್ತರು, ಅನುಭಾವಿಗಳು ಎನಲಾಗದು. ವೇಷವತೊಟ್ಟು ತಿರುಗುವ ಡೊಂಬಿಗಳನ್ನು ವಿರಕ್ತರು ಎನಲಾಗದು. ವಿರಕ್ತನಾದವನಿಗೆ ಜ್ಞಾನದ ಹಸಿವಾಗಿ ಭಕ್ತಿಯಲ್ಲಿ, ಆಚರಣೆಯಲ್ಲಿ ತೊಡಗಿ, ಅಖಂಡ ತತ್ವವನ್ನು ಅರಿಯುತ್ತಾನೆಯೇ ಹೊರತು ಉದರ ಪೋಷಣೆಗಾಗಿ ನಾನಾ ವೇಷವ ಧರಿಸುವವರೆಲ್ಲಾ ವಿರಕ್ತರಲ್ಲ.

"ಭಕ್ತಿ ಜ್ಞಾನ ವೈರಾಗ್ಯದಿಂದ ವಿರಕ್ತನಾಗಿ
ನನ್ನವರು ತನ್ನವರೆಂದು ನುಡಿವ ಕುನ್ನಿಗಳ ವಿರಕ್ತರೆಂಬೆನೆ ಅಯ್ಯಾ?
ಪಕ್ಷ ಪರಪಕ್ಷಂಗಳನರಿತು
ಹೇಹಂಗಳ ಜರಿಯಬಲ್ಲಡೆ ವಿರಕ್ತನೆಂಬೆನು.
ತ್ರಿವಿಧವನತಿಗಳೆದು ವಿರಕ್ತನಾದ ಬಳಿಕ
ತ್ರಿವಿಧವ ಹಿಡಿದ ಗುರುವ ಕಂಡಡೆ, ಅವನ ಅಡಿಗೆರಗಿದೆನಾದಡೆ
ಅಘೋರ ನರಕ ತಪ್ಪದು, ಅದೇನು ಕಾರಣವೆಂದಡೆ:
ಭವಪಾಶಂಗಳ ಹರಿದು ಅವಿರಳನಾದ ಕಾರಣ
ವ್ರತಭ್ರಷ್ಟ ಲಿಂಗಬಾಹ್ಯನ ಮುಖವ ನೋಡೆನು.
ಹೆಣ್ಣು, ಹೊನ್ನು, ಮಣ್ಣು ಹಿಡಿದವರ ಕಂಡಡೆ
ಎನ್ನ ಗುರುವೆಂದು ಅಡಿಗೆರಗೆನು,
ಬಸವಣ್ಣನೆ ಸಾಕ್ಷಿಯಾಗಿ ಅಮುಗೇಶ್ವರ ಲಿಂಗವೆ"[೧]

ನನ್ನವರು ತನ್ನವರೆಂಬ ಆಸೆ ಅಳಿಯದೆ ಭವಬಂಧನ ಬಿಡಿಸದೆ, ಭಕ್ತಿ ಜ್ಞಾನ ವೈರಾಗ್ಯದಿಂದ ವಿರಕ್ತನಾದೆ ಎಂದರೆ ವಿರಕ್ತ ಎನಿಸನು. ಆತ್ಮ ಪರಮಾತ್ಮ ಅರಿತು ಜೀವಾತ್ಮ ಅವನಲ್ಲಿ ಅಡಗುವುದನ್ನು ಅರಿತವನೇ ವಿರಕ್ತ. ಕಾಯವಿಕಾರ ಕಳೆದವನೇ ವಿರಕ್ತ. ತ್ರಿವಿಧ ಅಂದರೆ ಕಾಯ, ಇಂದ್ರಿಯ, ಪ್ರಾಣ, ಕಾಯಾನುಗ್ರಹದ ಮೂಲಕ ಕಾಯ ಪ್ರಸಾದಕಾಯವಾದಂತೆ, ಇಂದ್ರಿಯಾನುಗ್ರಹದ ಮೂಲಕ ಆನಂದವೆಲ್ಲಾ ಶಿವಾರ್ಪಿತ

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೯, ವ. ೬೭೦

ಮಾಡಿದವನು. ಪ್ರಾಣಾನುಗ್ರಹದ ಮೂಲ ಪ್ರಾಣಲಿಂಗಿಯಾದವನು ಇವನ್ನು ಅರಿತವನೇ ವಿರಕ್ತ. ಕಾಯ, ಇಂದ್ರಿಯ, ಪ್ರಾಣಗಳ ಜನನ ಮರಣದಲ್ಲಿ ತೊಳಲಾಡುವವರನ್ನು ವಿರಕ್ತರು ಎನಲಾಗದು. ಭವಪಾರಂಗಳ ಗೆದ್ದಿರುವುದಿಲ್ಲ. ಹೆಣ್ಣು, ಹೊನ್ನು, ಮಣ್ಣಿಗಾಗಿ ಆಸೆಪಡುವವರನ್ನು ಕಾಣಬಾರದು ಬಸವಣ್ಣನೇ ಸಾಕ್ಷಿ ಎಂದು ಪ್ರಮಾಣಿಕರಿಸಿದ್ದಾರೆ. ನುಡಿದಂತೆ ನಡೆದವರುಗಳು ಶರಣರು.

"ವಿರಕ್ತನಾದ ಬಳಿಕ ವಿಷಯಕ್ಕೆ ದೂರನಾಗಿರಬೇಕು.
ಒಣಗಿನ ಮರನ ವಾಯು ಅಪ್ಪಿದಂತಿರಬೇಕು.
ಸಮುದ್ರದೊಳಗೆ ತರುಗಿರಿಗಳು ಮುಳುಗಿದಂತರಬೇಕು.
ಮೂಗ ಕಂಡ ಕನಸಿನಂತಿರಬೇಕು.
ಜಾಲಗಾರ ಕಂಡ ರತ್ನದಂತಿರಬಲ್ಲಡೆ, ವಿರಕ್ತರೆಂಬೆನು
ಹೀಂಗಲ್ಲದೆ ಅರುಹುಳ್ಳವರೆಂದು ತಮ್ಮ ಅಗಮ್ಯವ ಬೀರುವ
ಅಜ್ಞಾನಿಗಳ ಭಕ್ತನೆಂದಡೆ, ಮಾಹೇಶ್ವರರನೆಂದಡೆ, ಪ್ರಸಾದಿಯೆಂದಡೆ
ಪ್ರಾಣಲಿಂಗಿಯೆಂದಡೆ, ಶರಣನೆಂದಡೆ, ಐಕ್ಯನೆಂದಡೆ
ಅಘೋರನರಕ ತಪ್ಪದು ಕಾಣಾ, ಅಮುಗೇಶ್ವರ ಲಿಂಗವೇ."[೧]

ವಿರಕ್ತನಾದವನು ವಿಷಯಸುಖಗಳಿಂದ ದೂರವಾಗಿರಬೇಕು. ಭವದ ಜಂಜಾಟಗಳಿಂದ ಮುಕ್ತನಾಗಿರಬೇಕು. ಒಣಗಿರುವ ಮರವನ್ನು ಗಾಳಿಯು ಹಿಡಿದಂತಿರಬೇಕು. ಅ ಮರ ಯಾವಾಗಲಾದರೂ ಗಾಳಿಯಿಂದ ಬಿಡಿಸಿ ಬೀಳಬಹುದು. ಇದ್ದರೂ ಇಲ್ಲದಂತ ಸ್ಥಿತಿಯಲ್ಲಿದೆ. ಸಮುದ್ರದಲ್ಲಿ ಹಲವಾರು ಮರಪರ್ವತಗಳು ಮುಳುಗಿವೆ. ಆದರೂ ದೂರದಲ್ಲಿ ಸಮುದ್ರ ಮಾತ್ರ ಕಾಣುತ್ತದೆ. ಒಳಗಿರುವ ತರುಪರ್ವತ ಯಾರಿಗೂ ಕಾಣದು. ಮೂಗನು ಕಂಡ ಕನಸನ್ನು ಅರಿತಿದ್ದರೂ ಹೇಳಲು ಸಾಧ್ಯವಾಗದು. ಜಾಲಗಾರನಿಗೆ ಕಂಡ ರತ್ನದಂತೆ ಆ ರತ್ನದ ಬೆಲೆಯನ್ನು ಜಾಲಗಾರ ತಿಳಿಯನು, ಅದರಂತೆ ವಿರಕ್ತರು, ಹೀಗಲ್ಲದೆ ಅರಿವನ್ನು ಬಲ್ಲವರೆಂದು ಅಹಂ ಬೀರುವವರು ವಿರಕ್ತನಲ್ಲ ಇಂಥ ವಿರಕ್ತನು ಷಷ್ಠಲಕ್ಕೆ ವಿರೋಧನು. ಆತನಿಗೆ ನಾಯಕ ನರಕ ತಪ್ಪದು ಎಂದು ವಿರಕ್ತನ ಬಗೆಗೆ ನಿಲುವನ್ನು ವ್ಯಕ್ತಪಡಿಸಿರುತ್ತಾರೆ.

"ವೇದಶಾಸ್ತ್ರ ಆಗಮ ಪುರಾಣಗಳಿಂದ ಅರಿದೆಹೆನೆಂಬ ಅಜ್ಞಾನಿಗಳು ನೀವು ಕೇಳಿರೋ
ಭಕ್ತಿಜ್ಞಾನ ವೈರಾಗ್ಯದಿಂದ ವಿರಕ್ತರಾದೆಹೆವೆಂಬರು ನೀವು ಕೇಳಿರೊ
ವಿರಕ್ತಿ ವಿರಕ್ತಿ ಎಂದೆಂಬಿರಿ ವಿರಕ್ತಿಯ ಪರಿ ಎಂತುಂಟು ಹೇಳಿರಣ್ಣಾ
ಅಷ್ಟಮದಂಗಳನೊತ್ತಿ ಮೆಟ್ಟಿ, ನೆಟ್ಟನೆ ನಿಂತು

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೨, ವ. ೬೮೪

ಇಷ್ಟಲಿಂಗವನರಿಯಬಲ್ಲಡೆ ವಿರಕ್ತನೆಂಬೆನು.
ಸಜ್ಜೆ ಶಿವದಾರವ ಧರಿಸಿ, ಒರ್ವನಾಗಿ ಒಂಟಿ ವಸ್ತ್ರವ ಕಟ್ಟಿ
ಸಂತೋಷಿಯಾಗಿರಬಲ್ಲಡೆ ವಿರಕ್ತರೆಂಬೆನು.
ಅಂಗದ ಮೇಲೆ ಲಿಂಗವುಳ್ಳ ಲಿಂಗಸಂಗಿಗಳಲ್ಲಿ
ಸಂದೇಹ ಸಂಕಲ್ಪವನತಿಗಳೆದು ಬಂದಭೇದವನರಿದು,
ಲಿಂಗಕ್ಕೆ ಕೊಟ್ಟು ಕೊಳಬಲ್ಲಡೆ ಲಿಂಗೈಕ್ಯರೆಂಬೆನು.
ಹೀಂಗಿಲ್ಲದೆ ಕರದಲ್ಲಿ ತಂದುದನತಿಗಳೆದು
ಕರ್ಪರದಲ್ಲಿ ತಂದುದ ಕೈಕೊಂಡು ಲಿಂಗೈಕ್ಯರು ಎಂಬ
ಲಿಂಗದ್ರೋಹಿಗಳನೆಂತು ಲಿಂಗೈಕ್ಯರೆಂಬೆನಯ್ಯಾ?
ಲಿಂಗಾಣತಿಯಿಂದ ಬಂದ ಪದಾರ್ಥವ ಸಂಹೇದಿಂದತಿಗಳೆದು
ಲಿಂಗೈಕ್ಯರೆಂಬ ಲಿಂಗದ್ರೋಹಿಗಳ ಸಮ್ಯಕ್‌ಜ್ಞಾನಿಗಳೆಂದಡೆ
ಸದಾಚಾರಿಗಳೆಂದೆಡೆ, ಅನುಭಾವದಲ್ಲಿ ಅಧಿಕರೆಂದಡೆ
ಅಘೋರ ನರಕವು ತಪ್ಪದು ಕಾಣಾ,
ಅಮುಗೇಶ್ವರಲಿಂಗವನರಿಯದ ಅನಾಚಾರಿಗಳ
ಲಿಂಗೈಕ್ಯರೆನಲಾಗದು ಕಾಣಿರಣ್ಣಾ"[೧]

ವೇದ, ಶಾಸ್ತ್ರ, ಪುರಾಣ, ಆಗಮಗಳೆಲ್ಲಾ ಅರಿದವೆಂಬ ಅಜ್ಞಾನಿಗಳೆಲ್ಲರೂ ವಿರಕ್ತರಾಗಲಾರರು. ವಿರಕ್ತನಾಗಬೇಕಾದರೆ ಕುಲ, ಛಲ, ಧನ, ರೂಪ, ಯೌವ್ವನ, ವಿದ್ಯೆ, ರಾಜ, ತಪ ಎಂಬ ಎಂಟು ಮದಗಳನ್ನು ಗೆದ್ದಿರಬೇಕು. ಸ್ಥಾವರಲಿಂಗ ಬಿಟ್ಟು ಘನಮಹಿಮೆವುಳ್ಳ ಇಷ್ಟಲಿಂಗವನರಿತವನೇ ವಿರಕ್ತ. ಸಜ್ಜೆ ಶಿವಧಾರ ಧರಿಸಿ, ವಸ್ತ್ರವಕಟ್ಟಿ ಮುಂದೆ ದೇವ, ತಾ ಹಿಂದೆ ಎಂಬಂತೆ ಲಿಂಗವಂತನೇ ವಿರಕ್ತ. ಲಿಂಗಸಂಗಿಗಳು ಸಂದೇಹವನ್ನು ಅಲ್ಲಗಳೆಯಬೇಕು. ಅದು ಬಿಟ್ಟು ಕರಸ್ಥಲದಲ್ಲಿರುವ ಲಿಂಗಕ್ಕೆ ಅಪಚಾರ ಮಾಡಿದ ಲಿಂಗದ್ರೋಹಿಗಳು ವಿರಕ್ತರಲ್ಲ. ಆತ್ಮ ಪರಮಾತ್ಮವೆಂಬ ಭಿನ್ನ ಅಲ್ಲಗಳೆದು ಸದಾಚಾರಗಳಲ್ಲಿ ನಡೆದವನೇ ಲಿಂಗೈಕ್ಯನು, ವಿರಕ್ತನು. ಹಾಗಿಲ್ಲದವರು ವಿರಕ್ತನೆನಿಸಲಾರರು. ಅಮುಗೇಶ್ವರ ಲಿಂಗವನರಿಯದ ಅನಾಚಾರಿಗಳೆಂದಿದ್ದಾರೆ.

**ಲಿಂಗ:** ಲಿಂಗ ಪದಕ್ಕೆ 'ಸ್ಥಾವರ', 'ಇಷ್ಟಲಿಂಗ', ಪರಶಿವ' ಎಂಬ ಅರ್ಥಗಳಿವೆ. ಬ್ರಹ್ಮಾಂಡದ ಸಂಕೇತವಾದ ಇದನ್ನು ಇಷ್ಟಲಿಂಗವೆಂದು ಕರೆದು ಅರಿವಿನ ಕುರುಹಾಗಿ ಕರಸ್ಥಲದಲ್ಲಿ ಸ್ಥಾಪಿಸಿದ್ದಾರೆ ವಚನಕಾರರು. ಜಗದಗಲ, ಮುಗಿಲಗಲ, ಮಿಗೆಯಗಲವಾದ ಲಿಂಗ ಅಗಮ್ಯ, ಅಗೋಚರ, ಅಪ್ರತಿಮ ಲಿಂಗವಾಗಿ ಕರಸ್ಥಲದಲ್ಲಿ ನೆಲೆನಿಂತಿದೆ. ಲಿಂಗಗಳಲ್ಲಿ ಎರಡು ವಿಧ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೩, ವ. ೬೮೮

ಒಂದು ಗುಡಿಗೋಪುರಗಳ ಸ್ಥಾವರಲಿಂಗ ಮತ್ತೊಂದು ಇಷ್ಟಲಿಂಗ. ಸಾಧಕನು ಇಷ್ಟಲಿಂಗದಿಂದ ತನ್ನನ್ನೇ ತಾನು ಲೀನವಾಗಿಸಿ ಸಪ್ತಚಕ್ರಗಳಲ್ಲಿ ನೆಲೆಸಿರುವ ಸಪ್ತಲಿಂಗಗಳನ್ನು ಗೋಚರಮಾಡಿಕೊಂಡು ಸಹಸ್ರ ಚಕ್ರದಲ್ಲಿರುವ ಶೂನ್ಯಲಿಂಗವನ್ನು ಸಾಕ್ಷಾತ್ಕಾರಗೊಳಿಸಿಕೊಳ್ಳವುದು ಸಾಧಕನ ಕೊನೆಯ ಸಾಧನೆಯಾಗಿದೆ.

ವಚನಕಾರರು ಒಂದರಗಳಿಗೆಯೂ ಲಿಂಗವನ್ನಗಲಿ ಇರಬಾರದು ಎಂದಿದ್ದಾರೆ. ಕೆಲವರು ಲಿಂಗವಗಲಿದರೆ ಪ್ರಾಣಬಿಡಬೇಕಾಗಿ ಹೇಳಿದರೆ ಮತ್ತೆ ಕೆಲವರು ಗುರುವಿನಿಂದ ಪುನಃ ಲಿಂಗದೀಕ್ಷೆ ಪಡೆಯಬಹುದೆಂದಿದ್ದಾರೆ. 'ಲಿಂಗ' ಗುರುಕಾರಣ್ಯದಿಂದ ಬಂದದ್ದು. ಗುಡಿಗೋಪುರಗಳ ಸ್ಥಾವರಲಿಂಗ ಪೂಜೆ ಕೇವಲ ಮೇಲ್ಜಾತಿಯರಿಗೆ ಮಾತ್ರ ಸೀಮಿತವಾಗಿತ್ತು. ಕೆಳವರ್ಗದವರು ಅದರತ್ತಿರವೂ ಸುಳಿಯುವಂತಿರಲಿಲ್ಲ. ಇದನ್ನು ಮನಗೊಂಡು 'ಇಷ್ಟಲಿಂಗ' ಕಲ್ಪನೆಯನ್ನು ಜಾರಿಗೆ ತಂದರು. ವಚನಕಾರರಿಗಿಂಗಲೂ ಮೊದಲೇ ಶೈವ ಪದ್ಧತಿಯಲ್ಲಿ ಲಿಂಗಧರಿಸುವುದು ಇದ್ದರೂ ವಚನಕಾರರಲ್ಲಿ 'ಇಷ್ಟಲಿಂಗ' ಅರಿವಿನ ಕುರುಹಾಗಿ ಪ್ರಖ್ಯಾತಿ ಪಡೆಯಿತು. ಇದು ಅರಿವಿನ ಕುರುಹಷ್ಟೇ ಹೊರತು ಇದುವೇ ದೇವರಲ್ಲ. ತನ್ನ ತಾನರಿತರೆ ತಾನೇ ದೈವಶರಣ ಎಂದಿದ್ದಾರೆ ವಚನಕಾರರು. ಅಮುಗೆರಾಯಮ್ಮನು 'ಲಿಂಗ' ಕುರಿತು ಹೇಳಿರುವ ವಚನಗಳ ಅರಿಯುವ ಪ್ರಯತ್ನಮಾಡಲಾಗಿದೆ.

'ಅಂಗದ ಆಪ್ಯಾಯನಕ್ಕೆ ಲೀಂಗವ ಮರೆದು ತಿರುಗುವ
ಭಂಡಭವಿಗಳನೇನೆಂಬೆನಯ್ಯಾ?
ಲಿಂಗದಲ್ಲಿ ನಿತ್ಯರಲ್ಲ; ಜಂಗಮದಲ್ಲಿ ಪ್ರೇಮಿಗಳಲ್ಲ!
ಹಿಡಿದ ಛಲದಲ್ಲಿ ಕಡುಗಲಿಗಳಲ್ಲ.
ಮೃಡನ ಕಂಡೆಹೆನೆಂಬ ಮೂರ್ಖರ ಮುಖವ ನೊಡಲಾಗದು;
ಅವರಡಿಯ ಮೆಟ್ಟಲಾಗದು ಕಾಣಾ ಅಮುಗೇಶ್ವರಾ'[೧]

ಲಿಂಗಧರಿಸಿದ ಮಾತ್ರಕ್ಕೆ ಲಿಂಗಾಂಗಿಯಾಗಲಾರನು. ಸಾಧನೆಯಲ್ಲಿ ಲಿಂಗನಿರೀಕ್ಷಣೆಯಲ್ಲಿ ತೊಡಗಿ ಸಪ್ತಚಕ್ರಗಳಲ್ಲೂ ಲಿಂಗಸ್ಥಾಪಿಸಿ ಶೂನ್ಯಲಿಂಗ ಅರಿತವನೇ ಶರಣ. ಈ ಹಾದಿ ಗುರುವಿನಿಂದ ತೋರುತ್ತದೆ. ಲಿಂಗವನ್ನು ಧರಿಸಿದ ಮಾತ್ರಕ್ಕೆ ಲಿಂಗವಂತನಲ್ಲ ಭವಿಯಾಗುತ್ತಾನೆ. ಲಿಂಗವಂತನಾದ ಮೇಲೆ ನಿತ್ಯನನ್ನು ಪರಮಾತ್ಮನನ್ನು ಅರಿಯಬೇಕು. ಜಂಗಮ ಅನುರಾಗಿಯಾಗಿರಬೇಕು. ಗುರು-ಲಿಂಗ-ಜಂಗಮವ ತ್ರಿವಿಧದ

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೮೬, ವ. ೫೯೦

ಅರಿದವನಾಗಿರಬೇಕು. ಅರಿಯದೆ ಮೃಡನ ಶಿವನ ಕಂಡೆ ಎನ್ನುವವರ ಮುಖ ನೋಡಲಾಗದು. ಅವರ ಅಡಿಯ ಮೆಟ್ಟಲಾಗದು ಎಂದಿದ್ದಾರೆ.

"ಅಂಗದ ಮೇಲೆ ಲಿಂಗವಿಲ್ಲದವರಲ್ಲಿ
ಲಿಂಗಾರ್ಪಿತವ ಬೇಡಲೇಕೆ?
ಅಂಗದ ಮೇಲೆ ಲಿಂಗವುಳ್ಳ ಲಿಂಗವಂತರಲ್ಲಿ
ಲಿಂಗಾರ್ಪಿತವ ಬಿಡಲೇತಕ್ಕೆ?
ಜಾತಿಗೋತ್ರವನೆತ್ತಿ ನುಡಿಯಲೇಕೆ?
ಸಹಜ ಶಿವಭಕ್ತರೆಂದು, ಶೀಲವಂತರೆಂದು, ವ್ರತಾಚಾರಿಗಳೆಂದು,
ವ್ರತಭ್ರಷ್ಟರೆಂದೂ ಅವರ ಕುಲಛಲವ ಕೇಳಿಕೊಂಡು
ಆಚಾರವುಳ್ಳವರು ಅನಾಚಾರಿಗಳು ಎಂದು
ಬೇಡುವ ಭಿಕ್ಷವ ಬಿಡಲೇತಕ್ಕೆ?
ಮದ್ಯಮಾಂಸವ ಭುಂಜಿಸುವವರು ಅನಾಚಾರಿಗಳು,
ಆವ ಕುಲವಾದಡೇನು, ಅಂಗದ ಮೇಲೆ ಲಿಂಗವುಳ್ಳವರೆಲ್ಲರು
ಆಚಾರವುಳ್ಳವರೆಂಬೆನಯ್ಯಾ;
ಅಮುಗೇಶ್ವರಲಿಂಗಕ್ಕೆ ಅವರೆ ಸದ್ಭಕ್ತರೆಂಬೆನಯ್ಯಾ"[೧]

ಅಂಗದ ಮೇಲೆ ಲಿಂಗವಿಲ್ಲದವರಿಗೆ ಲಿಂಗಾರ್ಪಿತವಿಲ್ಲ. ಲಿಂಗಾರ್ಪಿತ ಎಂದರೆ ಜಡವಸ್ತುಗಳೇ ಅಲ್ಲದೆ ತನ್ನ ದೇಹವನ್ನೇ ಕೊನೆಗೆ ಆತ್ಮವನ್ನೇ ಲಿಂಗದ ಅರಿವಿಗಾಗಿ ಅರ್ಪಣೆ ಮಾಡುವುದು, ದೇವರನ್ನು ಕಾಣಲು ತನ್ನನ್ನು ಸಜ್ಜುಗೊಳಿಸಿಕೊಳ್ಳುವುದು, ಅಂಗದ ಮೇಲಿರುವ ಲಿಂಗವನ್ನು ಅನುಭಾವಿಸಬೇಕು. ಆತನೇ ಶೀಲವಂತ, ವ್ರತಾಚಾರಿ, ಶಿವಭಕ್ತ, ಶಿವಭಕ್ತರನ್ನು ಜಾತಿಗೋತ್ರವೆತ್ತಿ ಮಾತನಾಡಿಸಬಾರದು. ಮದ್ಯಮಾಂಸವ ಸೇವನೆ ಮಾಡುವವರು ಯಾರೇ ಆದರು ಅನಾಚಾರಿಗಳು. ಯಾವ ಕುಲವಾದರೇನು ಅಂಗದ ಮೇಲೆ ಲಿಂಗವುಳ್ಳವನೇ ಆಚಾರವಂತನು ಆತನೇ ನಿಜವಾದ ಸದ್ಭಕ್ತ ಎಂದಿದ್ದಾರೆ.

"ಅಂದ ಚಂದಕ್ಕೆ ಲಿಂಗವ ಮರೆದು ತಿರುಗುವರು!
ಕಂಡ ಕನಸರಿಯರು! ಮುಂದಣ ಸುದ್ದಿಯ ನುಡಿವರು,
ನಿಜವನರಿಯದೆ ಲಿಂಗಸಂಗಿಗಳೆಂದಡೆ
ಅಮುಗೇಶ್ವರನ ಶರಣರು ಅತ್ತಿತ್ತ ಹೋಗೆಂಬರು."[೨]

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೮೬, ವ. ೫೯೧
೨. ಅದೇ., ಪು. ೧೮೭, ವ. ೫೯೨.

ಲಿಂಗ ಎಂದಿಗೂ ಅಂಗದಿಂದ ಅಗಲಬಾರದು. ಲಿಂಗಧರಿಸಿದರೆ ಅಂದ ಹೊಗುವುದೆಂದು ಮರೆತು ತಿರುಗುವರು ಭವಿಗಳು. ಕೈಯಲ್ಲಿರುವ ಲಿಂಗವರಿಯದೆ ಭವಿಷ್ಯತ್ತಿನ ಬಗೆಗೆ ಚಿಂತಿಸುವರು. ಭಗವಂತನೆಂಬ ಸತ್ಯ, ಶಿವನೆಂಬ ನಿಜವನ್ನು ಅರಿಯದೆ ಅವರನ್ನು ಲಿಂಗಸಂಗಿಗಳೆನ್ನಲು ಬಾರದು. ಶರಣರಾದವರು ಇಂಥವರ ಸಂಗ ಬಯಸಲಾರರೆಂದಿದ್ದಾರೆ.

"ಇಷ್ಟಲಿಂಗವ ಪೂಜಿಸುವ ಗುಪ್ತಪಾತಕರನೊಲ್ಲೆ
ಅದೇನು ಕಾರಣವೆಂದಡೆ
ಆ ಲಿಂಗವ ಘನವನರಿದು ತ್ರಿಕಾಲ ಪೂಜೆಯ ಮಾಡಬಲ್ಲಡೆ
ಮಹಾನುಭಾವಿಗಳೆಂಬೆ ಅಮುಗೇಶ್ವರಲಿಂಗವೆ."[೧]

ಇಷ್ಟಲಿಂಗದ ಗುಪ್ತ ಆರಾಧನೆಯನ್ನು ರಾಯಮ್ಮ ಒಪ್ಪುವುದಿಲ್ಲ. ಒಳಗೆ ಶಿವಪೂಜೆ, ಶಿವನರಿವು, ಹೊರಗೆ ಎಂದಿನಂತೆ ಭವಜಿವಿಗಳಂತಿರುತ್ತಾರೆ. ಈ ಇಬ್ಬಂದಿತನವನ್ನು ರಾಯಮ್ಮ ಖಂಡಿಸುತ್ತಾಳೆ. ಲಿಂಗದ ಘನವರಿದು ತ್ರಿಕಾಲ ಪೂಜೆಯ ಮಾಡಿ ಆ ಪೂಜೆಯ ಪುಳಕಂಗಳನ್ನೂ ಮನಸ್ಸಿನಲ್ಲಿ ತುಂಬಿಕೊಳ್ಳುವವರೇ ಮಹಾನುಭಾವಿಗಳು ಎಂದಿದ್ದಾರೆ.

'ಇಷ್ಟಲಿಂಗ ಭಿನ್ನವಾಗಲೊಡನೆ ತೆತ್ತಿಗರ ಕಂಡಲ್ಲಿ
ವಸ್ತುವ ಬಿಡುವುದು
ತೆತ್ತಿಗರ ಕಾಣದಿರ್ದಡೆ ನೀರು ನೇಣುವಿಷ ಔಷಧಂಗಳಲ್ಲಿ
ವಸ್ತುವಿನೊಡನೆ ವಸ್ತುವ ಬಿಡಬೇಕು. ಇದಕ್ಕೆ ಸಂದೇಹವಿಲ್ಲ.
ಆವಾವ ಪ್ರಕಾರದಲ್ಲಿ ಹೋದಡೂ ಸಂದೇಹವಿಲ್ಲ ಲಿಂಗೈಕ್ಯಂಗೆ
ಅಮುಗೇಶ್ವರ ಲಿಂಗವೇ ನಿಮ್ಮ ಶರಣರು
ಈರೇಳುಭುವನ ಹದಿನಾಲ್ಕು ಲೋಕದಲ್ಲಿ ಲಿಂಗಸಹಿತ ಒಪ್ಪುವರು!'[೨]

ಹದಿನಾಲ್ಕು ಲೋಕದಲ್ಲೂ ಲಿಂಗೈಕ್ಯನಿಗೆ, ಲಿಂಗ ಧರಿಸಿದವನಿಗೆ ಮಾನ್ಯತೆ ಇದೆ ಎಂಬುದನ್ನು ಅಮುಗೆಯ ರಾಯಮ್ಮನ ಈ ವಚನದ ಸಾರ.

'ವೇದಶಾಸ್ತ್ರ ಆಗಮ ಪುರಾಣಗಳಲ್ಲಿ
ಶ್ರುತಿ ಸ್ಮೃತಿಗಳಲ್ಲಿ ನುಡಿವುದು ಪುಸಿ,
ಪುರಾತನರ ವಚನಂಗಗಳಲ್ಲಿ ಇಷ್ಟಲಿಂಗ ಭಿನ್ನವಾಗಲು
ಮತ್ತೊಂದು ಲಿಂಗವ ಧರಿಸಿಕೊಳ್ಳಬೇಕೆಂಬುದು ಇಲ್ಲ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೯೧, ವ. ೬೦೭.
೨. ಅದೇ., ಪು. ೧೯೧, ವ. ೬೦೬.

ವೀರಶೈವವುಳ್ಳವರಿಗೆ ಇಷ್ಟಲಿಂಗ ಸಹಸ್ರಭಿನ್ನವಾಗಲು ಧರಿಸುವುದೆಂದು
ಚಿತ್ಪಿಂಡಾಗಮ ವಾತಲಾಗಮದಲ್ಲಿ ಸಂದೇಹವಿಲ್ಲವೆಂಬವರಿಗೆ
ಏಳುಕೋಟಿ ಯುಗಂಗಳಲ್ಲಿ ನಾಯಕನರಕ ತಪ್ಪದು.
ಕಟ್ಟಿದವರು ಚಂದ್ರಸೂರ್ಯರು ಪೃಥ್ವಿ ಅಪ್ಪುವುಳ್ಳಪರಿಯಂತರವು
ನಾಯಕನರಸಕದಲ್ಲಿಪ್ಪರು ಕಾಣಾ, ಅಮುಗೇಶ್ವರಲಿಂಗವೇ
ನಿಮ್ಮ ಶರಣರು ಲಿಂಗಭಿನ್ನವಾಗಲು ಲಿಂಗದೊಡನೆ
ಅಂಗವ ಬಯಲು ಮಾಡುವರಯ್ಯಾ"[೧]

ಲಿಂಗಭಿನ್ನವಾದರೆ ಲಿಂಗದೊಡನೆ ಅಂಗವಬಯಲು ಮಾಡಬೇಕಾಗಿ ರಾಯಮ್ಮ ತಿಳಿಸಿದ್ದಾರೆ. ವೇದಶಾಸ್ತ್ರ ಆಗಮ ಪುರಾಣಗಳಲ್ಲಿ ಶ್ರುತಿಸ್ಮೃತಿಗಳಲ್ಲಿ ಹೇಳಿರುವುದೆಲ್ಲಾ ಸುಳ್ಳು. ಭಗವಂತ ಅಲ್ಲೆಲ್ಲಿಯೂ ಇಲ್ಲ. ಪುರಾತನರ ವಚನಗಳಲ್ಲಿ ಇಷ್ಟಲಿಂಗ ಭಿನ್ನವಾದರೆ ಅಂದರೆ ಜೀವಾತ್ಮವೇ ಬೇರೆ ಪರಮಾತ್ಮವೇ ಬೇರೆ ಎಂದು ಭಿನ್ನವ ತಳೆದರೆ ಮತ್ತೊಂದು ಮಗದೊಂದು ಲಿಂಗ ಕೊಟ್ಟರೂ ಅಷ್ಟೆ. ಇಂಥ ಭವಿಗಳಿಗೆ ಏಳುಕೋಟಿ ಯುಗಗಳ ನಾಯಕ ನರಕ ತಪ್ಪದು. ಅವರಿಗೇನಾದರೂ ಪುನಃ ಲಿಂಗಕಟ್ಟಿದರೆ ಅವರೂ ಚಂದ್ರ ಸೂರ್ಯ ಪೃಥ್ವಿ ಆಕಾಶ ಪರಿಯಂತರ ಇರುವವರೆಗೂ ನಾಯಕನರಕದಲ್ಲಿರುವರು. ಶರಣರು ಜೀವಾತ್ಮವೇ ಪರಮಾತ್ಮ ಎಂಬುದನ್ನು ಅರಿಯದೆ ಭಿನ್ನತೆ ತಾಳಬಾರದು. ಲಿಂಗಭಿನ್ನವಾದರೆ ಲಿಂಗದೊಡನೆ ಅಂಗವ ಬಯಲು ಮಾಡಬೇಕೆಂದಿದ್ದಾರೆ.

"ಅರಿವು ಆಚಾರವುಳ್ಳ ಸಮ್ಯಜ್ಞಾನಿಗೆ ಹೇಳುವೆನಲ್ಲದೆ
ಜಗದಲ್ಲಿ ನಡೆವ ಜಂಗುಳಿಗಳಿಗೆ ನಾ ಹೇಳುವನಲ್ಲ.
ಆರುಸ್ಥಲವನರಿದ ಲಿಂಗೈಕ್ಯಂಗೆ ಅಂಗಮೇಲಣ ಲಿಂಗ ಭಿನ್ನವಾಗಲು
ಸಂದೇಹಗೊಳ್ಳಲಿಲ್ಲ, ಲಿಂಗಹೋಯಿತ್ತು ಎಂದು ನುಡಿಯಲಿಲ್ಲ.
ವೃತ್ತಗೋಳಕ ಗೋಮುಖ ಈ ತ್ರಿವಿಧ ಸ್ಥಾನದಲ್ಲಿ ಭಿನ್ನವಾಗಲು
ಲಿಂಗದಲ್ಲಿ ಒಡವೆರೆಯಬೇಕು
ಹೀಂಗಲ್ಲದೆ ಸಂದೇಹವೆಂದು ಘಟವ ಹೊರೆವ ಅಜ್ಞಾನಿ
ಕೋಟಿಜನ್ಮದಲ್ಲಿ ಶೂರಕನಾಗಿ ಹುಟ್ಟುವ
ಸಪ್ತಜನ್ಮದಲ್ಲಿ ಕುಷ್ಟನಾಗಿ ಹುಟ್ಟುವ
ದಾನೀ ಗರ್ಭದಲ್ಲಿ ಹುಟ್ಟಿ, ಹೊಲೆಯರ ಎಂಜಲತಿಂದು
ಭವಭವದಲ್ಲಿ ಬಪ್ಪುದು ತಪ್ಪದು ಕಾಣಾ,
ಚೆನ್ನಬಸವಣ್ಣ ಸಾಕ್ಷಿಯಾಗಿ ಅಮುಗೇಶ್ವರಲಿಂಗವೆ"[೨]

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೩, ವ. ೬೮೭
೨. ಅದೇ., ಪು. ೧೮೮, ವ. ೫೯೭

ಈ ವಚನದಲ್ಲಿಯೂ ರಾಯಮ್ಮ ಲಿಂಗ ಭಿನ್ನವಾಗಲು ಲಿಂಗದೊಡನೆ ಒಡವೆರೆಯಬೇಕೆಂದಿದ್ದಾರೆ. ವೃತ್ತಗೋಳಕ, ಗೋಮುಖ ಈ ತ್ರಿವಿಧ ಸ್ಥಾನದಲ್ಲಿ ಭಿನ್ನವಾದರೆ ಲಿಂಗದೊಂದಿಗೆ ತಾನೂ ಬಯಲಾಗಬೇಕಾಗುತ್ತದೆ. ಅರಿವು ಆಚಾರವುಳ್ಳ ಸಮ್ಯಕ್‌ಜ್ಞಾನಿಯಾದವನು ಹೀಗೆ ಮಾಡುತ್ತಾನೆಯೇ ಹೊರತು ಭವಿಗಳಲ್ಲ. ಇದರಲ್ಲಿ ಸಂದೇಹವಿಲ್ಲ. ಸಂದೇಹಪಟ್ಟವನೇ ಅಜ್ಞಾನಿ ಎನಿಸುತ್ತಾನೆ. ಕೋಟಿಜನ್ಮದಲ್ಲಿ ಹಂದಿಯಾಗಿ, ಸಪ್ತಜನ್ಮದಲ್ಲಿ ಕುಷ್ಠನಾಗಿ ಹುಟ್ಟಿ ದಾಸೀ ಗರ್ಭದಲ್ಲಿ ಹುಟ್ಟಿ ಹೊಲೆಯರ (ಲಿಂಗಾಗಿ ಅಲ್ಲದವನ) ಎಂಜಲ ತಿಂದು ಜನ್ಮ ಮರುಜನ್ಮದ ಪಾಶದಲ್ಲಿ ಚೆನ್ನಬಸವಣ್ಣನ ಸಾಕ್ಷಿಯಾಗಿ ಸಿಲುಕುತ್ತಾನೆ ಎಂದಿದ್ದಾರೆ.

**ಅರಿವು:** ಅರಿವು ಎಂದರೆ 'ಜ್ಞಾನ' ತಿಳುವಳಿಕೆ ಎಂದರ್ಥ. ಶರಣರ ನಿಲುವಿನಲ್ಲಿ ಅರಿವು ಎಂದರೆ ಚಿತ್‌ಸ್ವರೂಪಿ ಭಗವಂತನನ್ನು ತಿಳಿಯುವುದು. ಪರಶಿವನಲ್ಲಿ ಒಂದಾಗುವುದು ಎಂದರ್ಥ.

ಅರಿವನ್ನು ಕುರಿತು 'ವಚನ ಪರಿಭಾಷಾಕೋಶ'ದಲ್ಲಿ ಸಂಪಾದಕ ಡಾ. ಎಸ್.ಜಿ.ಮಹಾದೇವಪ್ಪ ಈ ರೀತಿ ಹೇಳಿರುತ್ತಾರೆ. "ಇದಕ್ಕೆ ಮೂರು ರೀತಿಯ ಆಯಾಮವಿದೆ.

೧. ವಿವೇಕ – ವಿವೇಕಿಯು ತನ್ನ ನೈಜಸ್ವರೂಪವಾವುದು, ತನ್ನ ಈಗಿನ ಸ್ಥಿತಿಗೆ ಕಾರಣವೇನು? ಮುಂತಾದವುಗಳನ್ನು ತಿಳಿದುಕೊಂಡಿದ್ದರೆ, ಅರಿವುಗೇಡಿ ದೇಹವೇ ಆತ್ಮವೆಂದೂ, ದೇಹಸೌಖ್ಯವೇ ಜೀವನದ ಪರಮಗುರಿ ಎಂದು ಭ್ರಮಿಸುತ್ತಾನೆ.
೨. 'ಅರಿವು ಉಳ್ಳ ನಕ್ಕ ಕುರುಹು' ಎಂಬ ವಚನದ ಪ್ರಕಾರ ಅರಿವು ಎಂಬುದಕ್ಕೆ ಯಾವುದೇ ಇಂದ್ರಿಯಗೋಚರ ವಸ್ತುವಿನ ಜ್ಞಾನ ಎಂಬರ್ಥವಿದೆ. ಇಂಥ ಅರಿವು ವಿವೇಕಿಗೂ ಇದೆ. ಅರಿವುಗೇಡಿಗೂ ಇದೆ.
೩. ಜ್ಞಾನ, ಚಿಕತ್ ಅಥವಾ ಪರಶಿವ, ನಮಗೆ ಅನೇಕ ವಸ್ತುಗಳ ಜ್ಞಾನವಿದೆ; ಚಿತ್ತದಲ್ಲಿ ಅನೇಕ ರೀತಿಯ ಲೋಭ, ಮೋಹ ಮುಂತಾದ ಸಂವೇಗಗಳೂ ಇವೆ; ಅದನ್ನು ಸಾಧಿಸಬೇಕು, ಇದನ್ನು ಸಾಧಿಸಬೇಕು ಎಂಬ ಆಸೆ, ಧ್ಯೇಯ ಇತ್ಯಾದಿಗಳೂ ಇವೆ; ನಾನು ಎಂಬ ಅಹಂಭಾವವು ಇವೆಲ್ಲದರ ಜೊತೆಯಲ್ಲಿಯೂ ಇರುತ್ತದೆ. ಆದರೆ ಅನುಭಾವದಲ್ಲಿ ಬುದ್ಧಿಯ, ಮನಸ್ಸಿನ, ಚಿತ್ರದ ಮತ್ತು ಅಹಂಕಾರದ ಕ್ರಿಯೆಗಳೆಲ್ಲ ಸ್ತಬ್ಧವಾಗುತ್ತದೆ. ಆಗ ಚಿತ್ ಅಥವಾ ಆತ್ಮ ಒಂದೇ ಉಳಿಯುತ್ತದೆ ಹಾಗೂ ಅದಕ್ಕೆ ತಾನು ಅನಂತ ಪರಶಿವನಲ್ಲಿ ಒಂದಾಗುತ್ತಿದ್ದೇನೆಂಬ ಅನುಭವವಾಗುತ್ತದೆ.[೧]

---

೧. ವಚನ ಪರಿಭಾಷಾಕೋಶ, ಸಂ. ಡಾ. ಎಸ್.ಜಿ.ಮಹಾದೇವಪ್ಪ, ಪುಟ. ೩೪

ಹೀಗೆ ಅರಿವು ಎಂದರೆ ಅಂತರಂಗದ ಜ್ಞಾನ ಜೀವಾತ್ಮ ಪರಮಾತ್ಮನೊಡನೆ ಬೆರೆತು ಒಂದಾಗುವಿಕೆಯ ಅರಿವು. ಈ ಅರಿವಿನ ಕುರುಹೇ ಲಿಂಗ. ಈ ಇಷ್ಟಲಿಂಗದಿಂದ ತನ್ನನ್ನು ತಾನು ಅರಿತರೆ ಶರಣ; ಮರೆತರೆ ಮಾನವ ಈ ಅರಿವನ್ನು ಶಿವಯೋಗದ ಮೂಲಕ ಸಾಕ್ಷಾತ್ಕರಿಸಿಕೊಳ್ಳಬೇಕು. ಅಮುಗೆರಾಯಮ್ಮ ಅರಿವನ್ನು ಕುರಿತು ಹೇಳಿರುವ ಚಿಂತನೆಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

"ಅರಿದ ಬಳಿಕ ಗರುಡಿಯ ಹೋಗಲೇತಕ್ಕೆ?
ನಿಸ್ಸಾಧಕವ ಸಾಧಿಸಿದ ಬಳಿಕ ಸಾಧಿಸಲೇತಕ್ಕೆ?
ಪಟುಭಟ ಬಂದಲ್ಲ ಪರಾಕ್ರಮವ ತೋರದಿರಬೇಕು.
ಮೈಯೆಲ್ಲಾ ಕಣ್ಣಾಗಿಪ್ಪವರು ಬಂದು ಮಥನಿಸಿದಡೆ
ಮಾತಾಡದೆ ಇರಬೇಕು
ಹೊದ್ದಿಯೂ ಹೊದ್ದದ ಸದ್ಯೋನ್ಮುಕ್ತನಾಗಿರಬಲ್ಲರೆ
ಅಮುಗೇಶ್ವರಲಿಂಗವು ಎಂಬೆನು"[೧]

ಸಾಧನೆಯ ಅಭ್ಯಾಸಕ್ಕಾಗಿ ಗರುಡಿಗೆ ಹೋಗುತ್ತಾರೆ. ಆದರೆ ಸಾಧನೆ ಸಾಧಿಸಿಯಾದ ಮೇಲೆ ಹೋಗುವ ಅಗತ್ಯವಿಲ್ಲ. ನಿಸ್ಸೀಮ ಸಾಧನೆಯ ಶಿಖರ ತಲುಪಿದ ಮೇಲೆ ಮತ್ತೆ ಸಾಧನೆಬೇಕಿಲ್ಲ. ಸಮರ್ಥಯೋಧ ಬಂದಲ್ಲಿ ಪರಾಕ್ರಮವ ತೋರಬಾರದು. ಮೈಯೆಲ್ಲಾ ಕಣ್ಣಾಗಿ ಎಚ್ಚರಿಕೆಯಿರುವವರು, ಜ್ಞಾನಿಗಳು ಬಂದು ಚರ್ಚೆಗೆಳೆದರೆ ಮಾತನಾಡಬಾರದು. ಅರಿವನ್ನು ಪಡೆದ ಶರಣ ಮೌನಿಯಾಗಿರುತ್ತಾನೆ. ತನ್ನ ಅಂತರಂಗದ ಪುಳಕಂಗಳನ್ನು ತಾನೇ ಒಳಗೇ ಅನುಭವಿಸುತ್ತಾ ಅಂತರ್‌ಸುಖಿಯಾಗಿರುತ್ತಾನೆ. ಆತನು ಯಾವಾಗಲೂ ಅಂತರ್ಮುಖಿಯಾಗಿರಬೇಕೇ ಹೊರತು ಹೊರಗೆ ಮಾತಿನ ವಾಗ್ವಾದದ ಬಲೆಯಲ್ಲಿ ಸಿಲುಕನು. ಅರಿವು ಪಡೆದ ಮೇಲೆ ಶರಣ ಮೌನಿಯಾಗಬೇಕೆಂದಿದ್ದಾರೆ.

"ಅರಿಯ ಬಲ್ಲಡೆ ವಿರಕ್ತನೆಂಬೆನು
ಆಚಾರವನರಿದಡೆ ಅಭೇದ್ಯನೆಂಬೆನು
ಸ್ತುತಿನಿಂದೆಗೆ ಹೊರಗಾದಡೆ ಸುಮ್ಮಾನಿ ಎಂಬೆನು
ಘನತತ್ವವನರಿದು ಶಿಶುಕಂಡ ಕನಸಿನಂತೆ ಇದ್ದಡೆ
ಶಿವಜ್ಞಾನಿ ಎಂಬೆನಯ್ಯಾ ಅಮುಗೇಶ್ವರಾ"[೨]

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೮೮, ವ. ೫೫೩.
೨. ಅದೇ., ಪು. ೧೮೮, ವ. ೫೯೬.

ಅರಿತವನೇ ವಿರಕ್ತ. ಆಚಾರಗಳನ್ನು ಅರಿತು ಅದರಂತೆ ನಡೆದವನೇ ಯಾರೂ ಭೇದಿಸಲಾಗದ ಅಭೇದ್ಯನವನು. ಲೋಕದ ಸ್ತುತಿನಿಂದೆಗಳಿಗೆ ಒಳಗಾಗಬಾರದು. ಘನಮಹಿಮನ ತತ್ವವನ್ನರಿತು ಶಿಶುಕಂಡ ಕನಸಿನಂತೆ ಮೌನಿಯಾಗಿದ್ದವನೇ ಶಿವಜ್ಞಾನಿ ಎಂದಿದ್ದಾರೆ. ಅರಿತವನು ಮಹಾಮೌನಿಯಾಗಿರಬೇಕೆಂದಿದ್ದಾರೆ.

"ಅರಿವು ಉಳ್ಳವರು ನೀವು ಅರಿಯದವರೊಡನೆ ನುಡಿಯದಿರಿ
ಪೊಡವಿಯ ಶರಣರೆಂದು ನಿಮ್ಮ ಅರುವಿನ ಪ್ರಸಂಗವನುಸುರದಿರಿ
ವೇಷಪೂರಿತರಾದವರ ಕಂಡು ನುಡಿಯದಿರಿ
ಅಮುಗೇಶ್ವರನೆಂಬಲಿಂಗವನರಿದವರು"[೧]

ಅರಿವನ್ನು ಹೊಂದಿದವನು ಅರಿಯದವರೊಂದಿಗೆ ಮಾತನಾಡದಿರುವುದೇ ಸರಿ. ಅವರೆಲ್ಲಾ ಭವಿಗಳು ಅವರೊಂದಿಗೆ ಅರಿವಿನ ಪ್ರಸಂಗವನ್ನು ಹೇಳಬಾರದು. ವೇಷಧಾರಿಗಳು, ಭಕ್ತರಂತೆ ಸೋಗುಹಾಕುವವರು ಅವರೊಂದಿಗೆ ಎಂದಿಗೂ ಅರಿತವರು ಸಮವೆನಿಸರು. ಅಂಥವರ ಸಂಗವೂ ಸಲ್ಲದು ಎಂದಿದ್ದಾರೆ.

"ಅರಿವು ಸಂಬಂಧವುಳ್ಳ ಪರಿಪೂರ್ಣಜ್ಞಾನಿಗಳ
ಅಡಿಗಳಿಗೆ ನಾನೆರಗುವೆನಯ್ಯಾ
ಎಡೆದೆರಹಿಲ್ಲದೆ ಮೃಡನನೆನೆವವರ
ಅಡಿಗಳಿಗೆ ನಾನೆರಗುವೆನಯ್ಯಾ
ಕಡುಗಲಿಗಳ ಕಂಡಡೆ ಪರಶಿವನೆಂಬೆನಯ್ಯಾ;
ಅಮುಗೇಶ್ವರ ಲಿಂಗವನರಿದ ಘನಮಹಿಮನೆಂಬೆನಯ್ಯಾ"[೨]

ಅರಿವು ಆತ್ಮ ಪರಮಾತ್ಮನೊಡನೆ ಬೆರೆತ ಪರಿಪೂರ್ಣಜ್ಞಾನಿಗಳ ಪಾದಗಳಿಗೆ ತಾನು ಎರಗುವುದಾಗಿಯೂ ಸದಾ ಶಿವನ ನೆನೆವವರ ಪಾದಗಳಿಗೆ ತಾನು ಎರಗುವುದಾಗಿ ತನ್ನ ತಾನರಿದವನು ಶ್ರೇಷ್ಠ ಅಂತಹವರ ಕಂಡಡೆ ಆತನೇ ಸಾಕ್ಷಾತ್ ಪರಶಿವನು. ಆತನೇ ಅಮುಗೇಶ್ವರಲಿಂಗವ ಅರಿತ ಘನಮಹಿಮನು ಎಂದಿದ್ದಾಳೆ.

"ಅರೆಯ ಮೇಲೆ ಮಳೆ ಹೊಯಿದಂತೆ
ಅರಿವುಳ್ಳವರಲ್ಲಿ ಅಗಮ್ಯವುಂಟೆ?
ವಾಯು ರೂಪಾದುದುಂಟೆ?
ಸರ್ವಸಂಬಂಧವ ಅರಿದಶರಣರ ಕಣ್ಣಿನಲ್ಲಿ ಕಂಡವರುಂಟೆ?

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೮೯, ವ. ೫೯೮
೨. ಅದೇ., ಪು. ೧೮೯, ವ. ೫೯೯

ತಿಪ್ಪೆಯ ಮೇಲಣ ಅರುವೆಯ ಸುಟ್ಟಡೆ ದಗ್ಧವಾದಂತೆ ಇರಬೇಕು
ಹೀಂಗಿರಬಲ್ಲಡೆ ಅನುಭಾವಿ ಎಂಬೆನಯ್ಯಾ
ಅಭೇದ್ಯರೆಂಬೆನಯ್ಯಾ, ಅಂಗಲಿಂಗ ಸಂಬಂಧಿಗಳೆಂಬೆನಯ್ಯಾ
ಲಿಂಗೈಕ್ಯರೆಂಬೆ, ನಿಜವಿರಕ್ತರೆಂಬೆನಯ್ಯಾ
ಹೀಂಗಲ್ಲದೆ ಆತ್ಮತೇಜಕ್ಕೆ ಹೋರಾಡುವ ಘಾತಕರ
ನಿಜವಿರಕ್ತರೆಂಬರೆ ಅಮುಗೇಶ್ವರಾ?"[೧]

ಅರಿಯದ ಅಜ್ಞಾನಿಗಳಿಗೆ ಎಷ್ಟೇ ಶಿವತತ್ವದ ಮಹತ್ವವನ್ನು ತಿಳಿಸಿದರೂ ಬಂಡೆಯ ಮೇಲೆ ಮಳೆ ಹೊಯಿದಂತೆ ನಿಷ್ಪ್ರಯೋಜನ. ಅದೇ ಮಳೆ ಭೂಮಿಯ ಮೇಲೆ ಬಿದ್ದರೆ ಹೇಗೆ ಭೂಮಿ ಫಲಭರಿತವಾಗುತ್ತದೋ ಹಾಗೆ ಅರಿವುಳ್ಳವನನ್ನು ಯಾರಿಗೂ ಸಮನಾಗಲಾರನು. ವಾಯುವಿಗೆ ರೂಪ ಇಲ್ಲ. ಅದನ್ನು ಅನುಭವಿಸಲು ಸಾಧ್ಯ. ಅದರಂತೆ ತನ್ನತಾನು ಅರಿತಶರಣ ಅರಿತಿರುವವನೆಂದು ಎಲ್ಲಿಯೂ ಕಾಣನು. ವಿಷಯಂಗಳೆಂಬ ದೇಹದ ವಾಂಛೆಗಳನ್ನು ಶಿವತತ್ವದಿಂದ ದಗ್ದಮಾಡಿದಾಗ ಮಾತ್ರ ಅರಿವು ಪಡೆಯಲು ಸಾಧ್ಯ. ಅಂಥವರು ಮಾತ್ರ ಲಿಂಗೈಕ್ಯರು, ಅಂಗಲಿಂಗ ಸಂಬಂಧಿಗಳು, ನಿಜವಿರಕ್ತರು. ಹೀಗಲ್ಲದೆ ಕೇವಲ ಜೀವಾತ್ಮದ ವಾಂಛೆಗಳಿಗೆ ಹೋರಾಡುವ ಘಾತಕರನ್ನು ನಿಜವಿರಕ್ತ ಎನಲಾಗದು ಎಂದಿದ್ದಾರೆ.

"ಆರುಸ್ಥಳದಲ್ಲಿ ನಿಂದವಂಗೆ ಬೇರೊಂದು ಬ್ರಹ್ಮದ ಮಾತೇಕೆ?
ಬೀದಿಯಲ್ಲಿ ನಿಂದು ನೀನೇನು, ತಾನೇನು ಎಂಬವಂಗೆ ಆದ್ಯರ ವಚನವೇಕೆ?
ಗಗನವ ಮುಚ್ಚುವಂಗೆ ಅಗಣಿತನ ಸುದ್ದಿಯೇಕೆ?
ಆರುಸ್ಥಲದಲ್ಲಿ ನಿಂದವಂಗೆ ಅಭೇದ್ಯನ ಸುದ್ದಿಯೇಕೆ?
ಆರು ಸ್ಥಲವೆಂಬುವ ಷಟ್‌ಸ್ಥಲಜ್ಞಾನಿಗಳ
ಅರಿವು ಮೀರಿದ ಘನವು ನಿಮಗೇಕೆ
ಅಮುಗೇಶ್ವರಲಿಂಗವನರಿಯರಣ್ಣಾ?"[೨]

ಭಕ್ತಸ್ಥಲ, ಮಹೇಶ್ವರಸ್ಥಲ ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳನ್ನು ಅರಿತು ಜ್ಞಾನಿಯಾದವನಿಗೆ ಬೇರೆ ಬ್ರಹ್ಮ, ಅನ್ಯದೈವಗಳ ವಿಚಾರ ಬೇಕಿಲ್ಲ. ಆತ್ಮ ಬೇರೆ, ಪರಮಾತ್ಮನೇ ಬೇರೆ ಎಂದು ಸಾರುವ ಭವಿಗಳಿಗೆ ಪುರಾತನರ ವಚನಗಳ ಅರಿವಾಗಿಲ್ಲ. ಶಿವತತ್ವವೆಂಬ ಗಗನದ ಮುಟ್ಟಿದವನಿಗೆ ಅಗಣಿತದ ಸುದ್ದಿಬೇಕಿಲ್ಲ. ಆರುಸ್ಥಲದಲ್ಲಿ ನಿಂದಿರುವವನಿಗೆ ಅಭೇದ್ಯದ ಸುದ್ದಿಬೇಕಿಲ್ಲ. ಆ ಷಟ್‌ಸ್ಥಲಜ್ಞಾನಿಗಳ ಅರಿವು ಅತ್ಯಂತ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೯೦, ವ. ೬೦೧
೨. ಅದೇ., ಪು. ೧೯೦, ವ. ೬೦೩

ಘನವಾದುದು. ಅದನ್ನು ಸಾಧಿಸುವುದೇ ಶರಣನ ಅಂತಿಮ ಗುರಿ. ಅದನ್ನು ಅರಿವಿನ ಮೂಲಕ ಶರಣ ಸಾಧಿಸಬಹುದೆಂದಿದ್ದಾರೆ. ಈ ಮುಖೇನ ಲಿಂಗ ಬಗ್ಗೆ ಅರವನ್ನು ಬೆಳೆಸಿಕೊಳ್ಳಿ ಎಂದಿದ್ದಾರೆ.

"ಸೂರ್ಯಂಗೆ ಅಲ್ಲಿ ಇಲ್ಲಿ ಎಂಬ ಸಂದೇಹವುಂಟೆ?
ಎಲ್ಲೆಲ್ಲಿಯೂ ತನ್ನ ಪ್ರಭೆಯ ಬೀರುತಿಪ್ಪುದು
ಬಲ್ಲ ಘನಮಹಿಮನ ಎಲ್ಲರು ಜರಿದಡೇನು ಕಿಂಕಿಲನೆ?
ಸರ್ವಾಂಗವು ಲಿಂಗವಾದ ನಿರಾಲಂಬಿ
ಕಾಬರ ಕಂಡು ತಾ ಕಾಬವನಲ್ಲ
ಅರಿವವರ ಕಂಡು ತಾನರಿವವನಲ್ಲ
ಬಿಡುವವರ ಕಂಡು ತಾ ಬಿಡುವವನಲ್ಲ
ಹಿಡಿದ ಛಲವ ತಾ ಬಿಡುವವನಲ್ಲ
ಅಮುಗೇಶ್ವರಲಿಂಗವನರಿದವನು"[೧]

ಸರ್ವಾಂಗವು ಲಿಂಗವಾದ ಶರಣ ಯಾರೊಂದಿಗೆಯೂ (ಭವಿಗಳೊಂದಿಗೆ) ಬೆರೆಯದೆ ಹಿಡಿದ ತನ್ನ ಛಲದಲ್ಲಿ ಸದಾ ನಿರತನಾಗಿರುವ ಪರಿಯನ್ನು ತಿಳಿಸಿದ್ದಾರೆ. ಸೂರ್ಯನಿಗೆ ಯಾವುದೇ ಸಂದೇಹವಿಲ್ಲದೆ ತನ್ನ ಪ್ರಖರತೆಯನ್ನು ಬೀರಿ ಸಮಾನತೆಯನ್ನು ಸಾಧಿಸಿದೆ. ಘನಮಹಿಮನಾದ ಅರಿದವನನ್ನು ಎಲ್ಲರೂ ಜರಿದರೂ ಆತ ವಿಚಲಿತನಾಗಲಾರ. ತನ್ನ ಅಂತ್ಯದ ನಿಲುವು ಶಿವನನ್ನು ಕಾಣುವುದನ್ನು ತನ್ನ ತಾನು ಅರಿಯುವ ಛಲದಲ್ಲಿಯೇ ನಿರತನಾಗಿರುತ್ತಾನೆ.

ಒಟ್ಟಿನಲ್ಲಿ ಅಮುಗೆಯ ರಾಯಮ್ಮನ ವಚನಗಳಲ್ಲಿ ಲಿಂಗಧರಿಸಿದರೆ ಧರೆಲೋಕದ ಮಾನ್ಯತೆ, ಅರಿವು, ಜ್ಞಾನಲಭಿಸುತ್ತದೆ ಎನ್ನುವುದಾಗಿದೆ. ಧರಿಸುವುದು ಮಾತ್ರವಲ್ಲದೆ ಅದರ ಘನತೆಯ ಅರಿವನ್ನು ಬೆಳೆಸಿಕೊಳ್ಳಬೇಕು ಎಂಬುದು ಅವರ ವಚನಗಳ ಅರ್ಥ.

**ಅನುಭಾವ:** 'ಅನುಭಾವ' ಎಂಬ ಪದಕ್ಕೆ ವಚನಕಾರರು ಬಯಲಲ್ಲಿ ಬಯಲಾಗುವುದು, ಸಮಾಧಿಸ್ಥಿತಿ ಹೊಂದುವುದು, ಆಧ್ಯಾತ್ಮಿಕತೆಯ ಅತ್ಯುನ್ನದ ನಿಲುವು ಎಂದಿದ್ದಾರೆ. ಇದು ಲೌಕಿಕ ಅನುಭವಕ್ಕಿಂತಲೂ ವಿಭಿನ್ನವಾದುದು. ಇದನ್ನು ಭಾಷೆಯಲ್ಲಿ ಅಭಿವ್ಯಕ್ತಿಸಲು ಸಾಧ್ಯವಿಲ್ಲ. ತಾನು ಅರಿತ, ಕಲಿತ ಅನುಭವವನ್ನು, ಆಧ್ಯಾತ್ಮ ಒಲವನ್ನು ಮೈಗೂಡಿಸಿಕೊಂಡವನು ಅನುಭಾವಿ. ಪಾರಮಾರ್ಥಿಕ, ಪರಲೋಕದ ಚಿಂತನೆಯುಳ್ಳವನು.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೬, ವ. ೭೦೦

ಇಂದ್ರಿಯಾನುಭವಕ್ಕಿಂತಲೂ ಅತೀತವಾದು ಅನುಭಾವಕ್ಕೆ ಏರಿ ಚಿತ್‌ಸ್ವರೂಪಿಲಿಂಗವೇ ತಾನಾದ ಬಳಿಕ ತನ್ನ ಅನುಭಾವವನ್ನು ಲೌಕಿಕ ಭಾಷೆಯಲ್ಲಿ ಹಿಡಿದಿಡಲು ಹೋದರೆ ಭಾಷೆಗೆ ನಿಲುಕುವುದಿಲ್ಲ. ಲಿಂಗಧ್ಯಾನ್ಯನಲ್ಲಿ ಸದಾ ನಿರತನಾಗಿ, ಲೌಕಿಕ ಆಸೆಕಾಮನೆಗಳನ್ನೆಲ್ಲಾ ಕಳೆದುಕೊಂಡು ಶಿವನ ಕೋಟಿಬೆಳಕಿನ ಆಂತರಿಕ ಅನುಭವವನ್ನು ಪಡೆಯುತ್ತಾನೆ. ಆ ಪಡೆದ ಅನುಭವವನ್ನು ಯಾರೊಡನೆಯೂ ಹೇಳಲು ಬರುವುದಿಲ್ಲ. ಗಾಢವಾಗಿ ನಿದ್ರಿಸುತ್ತಿದ್ದವನಿಗೆ ಹೀಗೆ ನಿದ್ರೆಯ ಅರಿವು ಇರುವುದಿಲ್ಲವೋ ಹಾಗೆ. ಈ ಲಿಂಗಾಂಗ ಸಾಮರಸ್ಯದ ಅರಿವು ಅತೀತವಾದುದು. ತಾನು ಬೇರೆ ಅಲ್ಲ ಪರಶಿವನು ಬೇರೆ ಅಲ್ಲ ಎಂಬ ನಿಲುವಿಗೆ ತಲುಪುವುದೇ ಶರಣರ ದೃಷ್ಟಿಯಲ್ಲಿ ಅನುಭಾವ.

ರಾಯಮ್ಮನ ಕೆಲವು ವಚನಗಳಲ್ಲಿ ಅನುಭಾವದ ನೆಲೆಯನ್ನು ಗುರುತಿಸಬಹುದಾಗಿದೆ.

"ಅನುಭಾವಿ ಅನುಭಾವಿಗಳೆಂಬ ಅಜ್ಞಾನಿಗಳ
ಮುಖವ ನೋಡಲಾಗದು
ಕಂಗಳ ಮುಂದಣ ಕಾಮ, ಮನದ ಮುಂದಣ ಆಸೆ,
ಅಂಗದಲ್ಲಿ ಅಹಂಕಾರವಾಗಿಪ್ಪವರ ಅನುಭಾವಿಗಳೆಂಬೆನೆ?
ಸೂಳೆಯ ಮನೆಯಲ್ಲಪ್ಪ ಗವುಡಿಯಂತೆ
ತಮ್ಮ ತಮ್ಮ ಹಿರಿಯತನವ ಮುಂದುಗೊಂಡು
ಕುರಿಗಳಂತೆ ತಿರುಗುವ ಜಡರುಗಳ ಅನುಭಾವಿಗಳೆಂಬೆನೆ?
ಹತ್ತೈದ ಕೂಡಿಕೊಂಡು ಇಕ್ಕಿ ಎರೆವವರ ಮನೆಗೆ ಹೋಗಿ
ಭಕ್ತಿಭಿನ್ನಹವ ಕೈಕೊಂಡಡೆ ಬೆಕ್ಕು ಹಾಲುಕುಡಿದಂತೆ
ಅತ್ಯತಿಷ್ಠದ್ದಶಾಂಗುಲನೆಂದು ಘಟವ ಹೊರೆವ ಮಿಟ್ಟೆಯ ಭಂಡರು
ಕಟ್ಟಿಗೆ ಮಣ್ಣಹಾಕಿ ಹೊಟ್ಟೆಯ ಹೊರೆವವನಂತೆ
ಇಷ್ಟಲಿಂಗವನರಿಯದೆ ಸತ್ಯರೆಂದು ಘಟವ ಹೊರೆವ
ಘಟಕರ್ಮಿಗಳ ಮುಖವ ನೋಡಲಾಗದು ಅಮುಗೇಶ್ವರಲಿಂಗವೆ"[೧]

ಅನುಭಾವಿಯಾದವನು ಮೊದಲಿಗೆ ಅರಿಷಡ್ವರ್ಗಗಳ ಗೆದ್ದು ಇಂದ್ರಿಯಾತೀತನಾಗಿರ–ಬೇಕು. ಹಾಗೆ ಮಾಡದೆ ಕಂಗಳ ಮುಂದೆ ಕಾಮ, ಮನದ ಮುಂದೂ ಆಸೆ, ಅಂಗದಲ್ಲಿ ತಾನೇ ಶ್ರೇಷ್ಠನೆಂಬ ಅಹಂಕಾರ ಮನೆಮಾಡಿದ್ದವರಿಗೆ ಅನುಭಾವಿಗಳು ಎನಲಾಗದು. ಸೂಳೆಯ ಮನೆಯಲ್ಲಿರುವ ದಾಸಿ ಅಂದರೆ ಕಂಡ ಕಂಡ ದೈವಗಳಿಗೆಲ್ಲಾ ಎರಗುವವರು. ಏಕಲಿಂಗ ನಿಷ್ಠೆ ಇಲ್ಲದವರು. ಕುರಿಗಳಂತೆ ತಿರುಗುವ ಜಡರುಗಳು, ಕೇವಲ ಹೊಟ್ಟೆಪಾಡಿಗಾಗಿ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೫೭, ವ. ೫೯೩

ತಾವು ಅರಿತವರೆಂದು ಸೋಗುಹಾಕಿ ತಿರುಗುವವರನ್ನು ಅನುಭಾವಿಗಳು ಎನ್ನಲು ಸಾಧ್ಯವಿಲ್ಲ. ತನ್ನ ತಾನು ಅರಿಯದೆ, ಹಲವು ಭವಿಗಳ ಮನೆಯಸುತ್ತಿ ಭಕ್ತಿಭಿನ್ನಹ ಮಾಡಿದರೆ ಬೆಕ್ಕು ಹಾಲುಕುಡಿದಂತೆ ದೇಹಹೊರೆವ, ಗಂಧ ಧರಿಸುವ ಭಂಡರು. ಹಿಡಿದ ವ್ರತಕ್ಕೆ ಮಣ್ಣಹಾಕಿ ಹೊಟ್ಟೆ ಹೊರುವವರು. ಇಷ್ಟಲಿಂಗವನರಿಯದ, ಹೊಟ್ಟೆಹೊರೆಯುವ ಇವರುಗಳನ್ನು ಅನುಭಾವಿಗಳು ಎನಲಾಗದೆಂದು ವಿಡಂಬಿಸಿದ್ದಾರೆ.

"ಅನುಭಾವಿಗೆ ಅಂಗಶೃಂಗಾರವುಂಟೆ?
ಅನುಭಾವಿಗೆ ಕಾಮಕ್ರೋಧವುಂಟೆ?
ಅನುಭಾವಿಗೆ ನಾಹಂ ಕೋಹಂ ಸೋಹಂ ಎಂಬ
ಭ್ರಾಂತಿನ ಭ್ರಮೆಯುಂಟೆ?
ಅನುಭಾವಿಗೆ ನನ್ನವರು ತನ್ನವರೆಂಬ
ಗನ್ನಗದಕಿನ ಮಾತುಂಟೆ?
ಅನುಭಾವಿಗಳೆಂಬವರು ಅಲ್ಲಿಗಲ್ಲಿಗೆ
ತಮ್ಮ ಅನುಭಾವಂಗಳ ಬೀರುವರೆ?
ಅನುಭಾವಿಗಳ ಪರಿಯೆ ಹೇಳಿಹೆ ಕೇಳಿರಣ್ಣ
ನೀರಮೇಲಣ ತೆಪ್ಪದಂತೆ, ಸಮುದ್ರದೊಳಗಣ ಬೆಂಗುಂಡಿ ನಂತೆ
ಇರಬಲ್ಲಡೆ ಅನುಭಾವಿಗಳೆಂಬೆನಯ್ಯಾ
ವಚನಂಗಳ ಓದಿ, ವಚನಂಗಳ ಕೇಳಿ
ಕಂಡ ಕಂಡ ಠಾವಿನಲ್ಲಿ ಬಂದುಗೆಲೆವ ಜಗಭಂಡರ
ಅತ್ಮತೇಜಕ್ಕೆ ತಿರುಗುವ ವೇಷಧಾರಿಗಳ ಕಂಡು
ಅನುಭಾವಿಗಳೆಂದಡೆ ಅಘೋರನರಕ ತಪ್ಪದು ಕಾಣಾ, ಅಮುಗೇಶ್ವರಾ?"[೧]

ಅನುಭಾವಿಗಳ ಲಕ್ಷಣ ಹೇಗಿರಬೇಕೆಂದು ರಾಯಮ್ಮ ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಅನುಭಾವಿಯಾದವನಿಗೆ ಅಂಗ ಶೃಂಗಾರವಿರುವುದಿಲ್ಲ. ಅಂಗಶೃಂಗಾರಕ್ಕಿಂತಲೂ ಆಂತರಿಕ ಚಿತ್ ಶೃಂಗಾರದ ಸ್ವರೂಪವನ್ನು ಅರಿತವನು. ಈತ ಅರಿಷಡ್ವರ್ಗಗಳ ಗೆದ್ದಿರುವವನು ಆತನಿಗೆ ನಾಹಂ, ಕೋಹಂ ಎಂಬ ಭ್ರಾಂತಿಯಿಲ್ಲ. ನನ್ನವರು, ತನ್ನವರೆಂಬ ಭಿನ್ನಭೇದವಿರುವುದಿಲ್ಲ. ಕಂಡಕಂಡಲ್ಲಿ ಅನುಭಾವದ ಪರಿಯನ್ನು ಹೇಳುವುದಿಲ್ಲ. ಅನುಭಾವಿಗಳು ನೀರಮೇಲಿರುವ ತೆಪ್ಪದಂತೆ, ಸಮುದ್ರದಲ್ಲಿ ಹಡಗನ್ನು ನಿಲ್ಲಿಸಲು ಬಳಸುವ ಭಾರದ ಗುಂಡಿನಂತಿರಬೇಕು. ನೀರ ಮೇಲಿದ್ದರೂ ನೀರಿನಿಂದ ಅತೀತರಾದವರು. ಭವದನಡುವಿದ್ದರೂ ಲೌಕಿಕಕ್ಕಿಂತ

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೮೭, ವ. ೫೫೪

ಅತೀತರಾದವರು. ಕಂಡ ಕಂಡ ಠಾವಿನಲ್ಲಿ ತಮ್ಮ ಅನುಭಾವವನ್ನು ಬಂಡುಗೆರೆವ ವೇಷಧಾರಿಗಳೆಲ್ಲಾ ಅನುಭಾವಿಗಳೆಂದರೆ ಅಘೋರನರಕ ತಪ್ಪದು ಎಂದು ಎಚ್ಚರಿಸಿದ್ದಾರೆ.

**೪) ನೈತಿಕ ಪ್ರಜ್ಞೆ**

ವಚನಕಾರರು ತಮ್ಮ ಸಮಾಜದಲ್ಲಿದ್ದ ಹಲವಾರು ಸಾಮಾಜಿಕ ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಹುಡುಕಲು ಪ್ರಯತ್ನಿಸಿದರು. ಸಮಾಜದ ಸ್ವಸ್ಥ್ಯವಾತಾವರಣಕ್ಕಾಗಿ ವ್ಯಕ್ತಿ ಅನುಸರಿಸಲೇಬೇಕಾದ ನೀತಿಯ ಪಾಠಗಳನ್ನು ಉಸುರಿದರು. 'ಕಲಬೇಡ, ಕೊಲಬೇಡ ಹುಸಿಯ ನುಡಿಯಲುಬೇಡ', 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ', 'ಹೊಲಸು ತಿನ್ನುವವನೇ ಹೊಲೆಯ' 'ಆವ ಕುಲವಾದಡೇನು ಲಿಂಗಧರಿಸಿದವನೇ ಕುಲಜನು' ಹೀಗೆ ಹಲವಾರು ನೈತಿಕ ಪ್ರಜ್ಞೆಯನ್ನು ಬೆಳೆಸುವ ವಚನಗಳು ಸಾಕಷ್ಟಿವೆ. ಮೊದಲು ತನ್ನನ್ನು ತಾನು ಪರಿಶುದ್ಧಗೊಳಿಸಿಕೊಂಡು ತದನಂತರ ಆಧ್ಯಾತ್ಮಿಕ ಔನ್ನತ್ಯಪಡೆಯಬಹುದೆಂಬ ಸರಳ ಚಿಂತನೆಗಳನ್ನು ನಮ್ಮೆಲ್ಲರಿಗೂ ಉಣಬಡಿಸಿದ್ದಾರೆ. ಸಮಾಜ ಮತ್ತು ವ್ಯಕ್ತಿಯಲ್ಲಿದ್ದ ಅಂಕುಡೊಂಕುಗಳು ಮತ್ತು ಓರೆಕೋರೆಗಳನ್ನು ತಿದ್ದುವುದರ ಜೊತೆಗೆ ಆಧ್ಯಾತ್ಮಿಕ ಶಿಖರಕ್ಕೇರುವ ಔನ್ನತ್ಯವನ್ನು ತಿಳಿಯಪಡಿಸಿದ್ದಾರೆ. ರಾಯಮ್ಮನ ವಚನಗಳಲ್ಲಿ ಅಂದೂ ಇಂಥ ನೈತಿಕ ಪ್ರಜ್ಞೆಯನ್ನು ಅಭಿವ್ಯಕ್ತಿಸಿರುವ ವಚನಗಳನ್ನು ಕಾಣಬಹುದಾಗಿದೆ.

"ಹೆದರದಿರು ಮನವೆ, ಹಿಮ್ಮೆಟ್ಟದಿರು ಮನವೆ
ಹಿಡಿದ ಛಲವಬಿಡದಿರುಮನವೆ
ಜರಿದರೆಂದು ಝುಂಕಿಸಿದರೆಂದು
ಶಸ್ತ್ರ, ಸಮಾಧಿ ನೀರು ನೇಣು ವಿಷ ಔಷಧದಲ್ಲಿ ಘಟವ ಬಿಡದೆ
ಗುರುವಾದಡು, ಲಿಂಗವಾದಡು ಜಂಗಮವಾದಡು
ನೊಸಲಲ್ಲಿ ಕಣ್ಣುಳ್ಳ ಪಶುಪತಿಯಾದಡು
ತೆತ್ತಿಗರು ಕಂಡು ಒತ್ತಿ ನುಡಿದರೆಂದು ಘಟವಬಿಡುವ ಘಟಕರ್ಮಿಗಳು
ಏಳೇಳು ಜನ್ಮದಲ್ಲಿ ಸೂಕರನ ಹೊಟ್ಟೆಯಲ್ಲಿ ಹುಟ್ಟಿ
ನೂರೊಂದು ಕುಲ ಹದಿನೆಂಟು ಜಾತಿಯ ಅಮೇಧ್ಯವ ತಿಂದು
ಹೊಲೆಯರ ಮನೆಯ ಹೊಸ್ತಿಲ ಕಾಯ್ದುಕೊಂಡಿಪ್ಪರಯ್ಯಾ
ಅಮುಗೇಶ್ವರಲಿಂಗವೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ"[೧]

ನೊಂದಮನಸ್ಸಿಗೆ ಒಂದಿಷ್ಟು ಸಮಾಧಾನವನ್ನು ತಾನು ತಂದುಕೊಳ್ಳುವುದರ ಜೊತೆಗೆ ಉಳಿದವರಿಗೂ ಸಮಾಧಾನ ಮಾಡಿದ್ದಾರೆ – ಯಾರಾದರೂ ನೋಯಿಸಿದರು,

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೭, ವ. ೭೦೨

ಹಿಂಸೆಯಾಗುವಂತೆ ಮಾತನಾಡಿದರೆಂದ ಮಾತ್ರಕ್ಕೆ ಹೆದರಬಾರದು, ಹಿಡಿದ ಛಲವ ಬಿಡದೆ ಮುಂದುವರಿಸಬೇಕು. ಸಮಾಜದಲ್ಲಿ ಹುಟ್ಟಿದ ಮಾತ್ರಕ್ಕೆ ಸ್ತುತಿನಿಂದನೆಗಳು ಬಂದರೆ ಸೈರಣೆಯಿಂದ ಸಮಾಧಾನ ತಾಳಬೇಕು. ಗುರು, ಜಂಗಮ, ಲಿಂಗವಾದರೂ, ಪಶುಪತಿಯಾಗಲಿ ಅಥವಾ ಸಂಬಂಧಿಕರಾಗಲೀ ಯಾರೇ ಆಗಲಿ ಜರಿದು ಝುಂಕಿಸಿದರೂ ಶಸ್ತ್ರ, ನೀರು, ನೇಣು, ವಿಷಕಾರಿ ಔಷಧಗಳಿಂದ ಪ್ರಾಣಹಾನಿ ಮಾಡಿಕೊಳ್ಳಬಾರದು. ಆತ್ಮಹತ್ಯೆ ಮಾಡಿಕೊಂಡರೆ ಏಳೇಳು ಜನ್ಮದಲ್ಲಿ ಹಂದಿಯ ಹೊಟ್ಟೆಯಲ್ಲಿ ಹುಟ್ಟಿ, ಹದಿನೆಂಟು ಜಾತಿ ಅಮೇಧ್ಯವ ತಿಂದು ಹೊಲೆಯರ(ಭವಿಗಳು) ಮನೆಯ ಹೊಸ್ತಿಲನ್ನು ಕಾಯ್ದುಕೊಂಡಿರುತ್ತಾರೆ. ಈ ಮಾತಿಗೆ ಅಮುಗೇಶ್ವರಲಿಂಗವೆ ಸಾಕ್ಷಿ ಎಂದಿದ್ದಾರೆ.

"ಸಾಧನೆಯ ಬಲ್ಲೆನೆಂದು ಹಾದಿಹೋಕರಕೂಡೆ ಹೋರದಿರಬೇಕು
ಬೀದಿಯಲ್ಲಿ ನಿಂದು ಬೀರದಿರಬೇಕು
ಬಲ್ಲೆಯಾ ಎಂದಡೆ ಬಲುಗೈಯನರಿಯೆನೆನಬೇಕು
ನೆಟ್ಟನೆ ನಿಂದು ಪಟ್ಟಕ್ಕೆಡೆಯರಾದವರೆಂಬೆ
ಅಮುಗೇಶ್ವರಲಿಂಗಕ್ಕೆ ಅಧಿಕರೆಂಬೆ"[೧]

ತಾನು ಮಹಾ ಸಾಧಕ ಎಂದು ಅರಿತವನು ಕಂಡಕಂಡಲ್ಲಿ ದಾರಿಯಲ್ಲಿ ತಿರುಗಾಡುವವರ ಮುಂದೆ ಜಂಭ ಕೊಚ್ಚಿ ತೋರಬಾರದು. ಅತಿಯಾಗಿ ತನ್ನನ್ನು ತಾನು ಮೇಳೈಸಬಾರದು. ಅಂಥ ಸಾಧಕ ಮೌನಿಯಾಗಿರುತ್ತಾನೆ. ಅಂಥವರೇ ಅಮುಗೇಶ್ವರಲಿಂಗಕ್ಕೂ ಅಧಿಕರಾಗುತ್ತಾರೆ. ಸಾಧಿಸಿದವನು ಮೌನಿಯಾಗಿರುತ್ತಾನೆ. ಆ ಮೌನವೇ ಸಾಧನೆಗೆ ಭೂಷಣ.

"ಶೀಲವಂತನಾದಡೆ ಜಾತಿಯ ಬಿಡಬೇಕು
ಶಿವಜ್ಞಾನಿಯಾದಡೆ ಸಮಯವ ಬಿಡಬೇಕು
ಹೀಂಗಲ್ಲದೆ ಜಗದಲ್ಲಿ ನಡೆವ ಭ್ರಾಂತರ ಸುದ್ದಿಯೇಕೆ?
ನಿಭ್ರಾಂತನಾದ ಶರಣಂಗೆ ಅಮುಗೇಶ್ವರಾ"[೨]

ಶೀಲವಂತನಿಗೆ (ಆಧ್ಯಾತ್ಮಿಕ, ನೈತಿಕ ನಿಯಮಗಳನ್ನು ಆಚರಿಸುವವರು ಶೀಲವಂತರು) ಜಾತಿಯ ಹಂಗಿಲ್ಲ. 'ಆ ಜಾತಿ, ಈ ಜಾತಿ ಎನಬೇಡ ದೇವನೊಲಿದವನೇ ಜಾತ ಸರ್ವಜ್ಞ' ಎಂಬಂತೆ ಜಾತಿ ಆಚರಣೆಯ ವಿರೋಧಕರು ವಚನಕಾರರು. ಶಿವಜ್ಞಾನ ಸಂಪಾದನೆಯನ್ನು ಹೊಂದಲು, ತನ್ನ ತಾನು ಅರಿಯಲು ಸಮಯದ ಹಂಗಿಲ್ಲ. ಧಾಮಿಕ ಕಟ್ಟಳೆಗಳ ಹಂಗಿಲ್ಲ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೧೫, ವ. ೬೯೭
೨. ಅದೇ., ಪು. ೨೧೪, ವ. ೬೯೧

ಭ್ರಮಾಜೀವನ ತರವಲ್ಲ. ಅಂಥ ಬ್ರಾಂತಿಗಳ ಸುದ್ದಿಯೂ ಬೇಕಿಲ್ಲ. ಶರಣನೆಂದೂ ನಿಭ್ರಾಂತನು, ಭ್ರಮೆಯನ್ನು ಗೆದ್ದಿರುವವನು. ಅವನೆಂದೂ ಭ್ರಾಂತರು, ಭವಿಗಳು, ಲೌಕಿಕಡಂಬಾಚಾರಿಗಳ ಬಗೆಗೆ ಚಿಂತಿಸುವುದಿಲ್ಲ.

"ಪಟ್ಟಣದ ಸೂಳೆಯ ಕೂಡೆ ಪರಬ್ರಹ್ಮವ ನುಡಿಯಲೇಕೆ?
ಸಂತೆಗೆ ಬಂದವರ ಕೂಡೆ ಸಹಜವ ನುಡಿಯಲೇಕೆ?
ಕತ್ತೆಯನೇರುವರ ಕೂಡೆ ನಿತ್ಯರೆಂದು ನುಡಿಯಲೇಕೆ?
ಹೊತ್ತುಹೋಕರ ಕೂಡೆಕರ್ತನ ಸುದ್ದಿಯ ನುಡಿಯಲೇಕೆ?
ಅಮುಗೇಶ್ವರಲಿಂಗವನರಿದ ಶರಣಂಗೆ
ಹತ್ತು ಸಾವಿರವನೋದಲೇಕೆ?
ಹತ್ತು ಸಾವಿರವ ಕೇಳಲೇಕೆ?
ಭ್ರಷ್ಟರ ಕೂಡೆ ನುಡಿಯಲೇಕೆ?"[೧]

ಕಟ್ಟಿಕೊಂಡಿರುವ ಇಷ್ಟಲಿಂಗವ ಬಿಟ್ಟು ನಾನಾದೈವಂಗಳಿಗೆ ಎರಗುವ ಭವಿಗಳ ಸಂಗ ಮಾತನಾಡದಿರುವುದೇ ಮೇಲು. ಸಂತೆಯಲ್ಲಿ ಸಹಜವ(ಲಿಂಗದ) ಅರಿವಿನ ಸ್ಥಿತಿಯನ್ನು ಕಾಣಲು ಸಾಧ್ಯವಿಲ್ಲ. ಭವಿಗಳ ಸಂಗ ತಾವು ನಿತ್ಯರೆಂದು, ತಾವೇ ಶಿವನೆಂದು ನುಡಿಯದಿರುವುದೇ ಮೇಲು. ತನ್ನ ತಾನರಿತ ಶರಣನು ಮತ್ತೇನನ್ನೂ ಸಾಧಿಸುವ, ಓದುವ ಕಸರತ್ತು ಪಡಬೇಕಿಲ್ಲ. ಭ್ರಷ್ಟರೊಡನೆ, ಭವಿಗಳ ಸಂಗ ಶರಣರು ನುಡಿಯದಿರಬೇಕೆಂದಿದ್ದಾರೆ.

"ನಿಜವನರಿದ ವಿರಕ್ತನು ನಿಜಾನುಭಾವಿಯೆಂದು ನುಡಿವನೆ?
ಅತ್ಯತಿಷ್ಠದ್ದಶಾಂಗುಲನೆಂಬ ಘನವನರಿದು
ಕತ್ತಲೆಯ ಮನೆಯಲ್ಲಿ ಮಧುರವಸವಿದಂತೆ ಇರಬೇಕು
ಕಾಣಾ ಅಮುಗೇಶ್ವರಾ"[೨]

ನಿಜ ಅಂದರೆ ಸತ್ಯ, ನಿತ್ಯ, ಪರಮಾತ್ಮ, ಶಿವತತ್ವ, ತನ್ನತಾನರಿವು ಎಂದರ್ಥ. ಈ ಸತ್ಯ ಅರಿತವನು ವಿರಕ್ತನು. ಆತನೇ ನಿಜಾನುಭವಿ. ಆ ಜ್ಞಾನ ಸಂಪಾದಿಸಿದವರು ಯಾರೊಂದಿಗೂ ತಾ ನಿತ್ಯನೆಂದು ನುಡಿಯುವುದಿಲ್ಲ. ಶ್ರೇಷ್ಠ, ಅತ್ಯಂತ ಪ್ರಮುಖ ಘನತತ್ವ ಅರಿತವರು ಕತ್ತಲೆಯ ಮನೆಯಲ್ಲಿ ಮಧುರವ ಸವಿದಂತೆ ಇರಬೇಕು. ಆ ಸವಿ ಹೇಗಿತ್ತು ಎಂದು ಕೇಳಿದರೆ ಹೇಳಲಾಗದು. ಅದನ್ನು ಅನುಭವಿಸಿದಾಗ ಮಾತ್ರ ಅದರ ಅರಿವಾಗುವುದು. ಇದೇ ಅರ್ಥದ ಮತ್ತೆರಡು ನೀತಿ ವಚನಗಳು ಇಂತಿವೆ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೭, ವ. ೬೬೪
೨. ಅದೇ., ಪು. ೨೦೫, ವ. ೬೫೬

"ಧೀರನೆಂದು ಬೀದಿಯಲ್ಲಿ ನುಡಿಯಲೇಕೆ?
ಕಾವಲ್ಲಿ ಕಾಣಬಹುದು
ಮಹಾಜ್ಞಾನಿಗಳು ನೋಡಲೊಡನೆ ಕಾಣಬಹುದು
ನಾನೇ ಬ್ರಹ್ಮವೆಂಬ ಭವಗೇಡಿಗಳ
ಮೆಚ್ಚುವನೆ ಅಮುಗೇಶ್ವರಲಿಂಗವು?"[೧]

ವೀರತ್ವವನ್ನು ಯುದ್ಧಭೂಮಿಯಲ್ಲಿ ಪ್ರದರ್ಶಿಸಬೇಕೇ ಹೊರತು ಬೀದಿಯಲ್ಲಿ ಅಲ್ಲ. ಅವನು ಕಾಯುವ ಕಾಪಾಡುವ ಗುಣದಲ್ಲಿ ಕಾಣಬಹುದು. ತಾನು ವಿರಕ್ತನೆಂದು, ನಿತ್ಯನೆಂದು ನುಡಿಯುವ ಅಗತ್ಯವಿಲ್ಲ. ಮಹಾಜ್ಞಾನಿಗಳನ್ನು ನೋಡಿದಕೂಡಲೇ ಗುರುತಿಸಬಹುದು. ವಿರಕ್ತರಾಗದೆ, ಅರಿವು ಸಂಪಾದಿಸದೆ ತಾನೇ ಬ್ರಹ್ಮನೆಂದು ಹೇಳುವ ಭವಗೇಡಿಗಳನ್ನು ಲಿಂಗವು ಮೆಚ್ಚುವುದಿಲ್ಲ ಎಂದಿದ್ದಾರೆ ರಾಯಮ್ಮ. ಇಂಥ ಸ್ವಘೋಷಿತ ದೇವ ಮಾನವರಿಗೆ ಅಂದಿನ ಕಾಲದಲ್ಲೇ ಟೀಕಿಸಿರುವುದನ್ನು ಈ ವಚನದಲ್ಲಿ ಕಾಣಬಹುದು.

"ತೆತ್ತಿಗರು ಬಂದು ನಿತ್ಯನಾದೆಯಾ ಎಂದಡೆ
ಬಿಚ್ಚದಿರಬೇಕು ತನ್ನ ಶಿವಜ್ಞಾನವ
ತೆತ್ತಿಗರು ಕಂಡು ಮುಕ್ತನಾದೆಯಾ ಎಂದಡೆ
ಬಿಚ್ಚದಿರಬೇಕು ಅಮುಗೇಶ್ವರಲಿಂಗದ ಅರಿವ"[೨]

ತೆತ್ತಿಗರು ಸಂಬಂಧಿಕರು ಬಂದು ನಿತ್ಯನಾದೆಯಾ, ಶಿವತತ್ವ ಅರಿತೆಯಾ ಎಂದು ಕೇಳಿದರೆ ಶಿವಜ್ಞಾನವನ್ನು ಹೇಳಬಾರದು. ಮುಕ್ತನಾದೆಯಾ ಎಂದರೆ ಅಮುಗೇಶ್ವರ ಲಿಂಗವರಿದ ಶರಣ ತನ್ನ ಜ್ಞಾನದ ಅರಿವನ್ನು ಯಾರೊಡನೇ ಹೇಳಬಾರದು. ಹೇಳುವಂಥದಲ್ಲ ಅರಿವೆಂಬುದು. ಅದನ್ನು ಅನುಭವಿಸಿ ಅನುಭಾವಿಸಬೇಕು.

"ಜ್ಞಾನವೆಂಬುದು ಬೀದಿಯ ಪಸರವೆ?
ಬೊಕ್ಕಣಕ್ಕೆ ತುಂಬುವ ಹುರುಳಿಯೆ?
ಚೀಲದೊಳಗಣ ಜೀರಿಗೆಯೇ
ಗಾಣದೊಳಗಣ ಹಿಂಡಿಯೆ?
ಜ್ಞಾನವೆಂಬುದ ಎಲ್ಲರೊಡನೆ ಬೀರದಿರಬೇಕು
ಗೆಲ್ಲ ಸೋಲಿನ ಮಾತು ಬಂದಡೆ ಗೆಲ್ಲವನುಡಿಯದಿರಬೇಕು
ಅಮುಗೇಶ್ವರಲಿಂಗವೆಂಬೆನು"[೩]

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೩, ವ. ೬೫೧
೨. ಅದೇ., ಪು. ೨೦೨, ವ. ೬೪೭
೩. ಅದೇ., ಪು. ೨೦೨, ವ. ೬೪೫

ಜ್ಞಾನ ಪಡೆಯುವುದು ಮತ್ತು ಜ್ಞಾನಕೊಡುವುದು ಅಷ್ಟು ಸುಲಭದ ಕೆಲಸವಲ್ಲ. ಜ್ಞಾನ ಎಂದರೆ 'ಅರಿವು', ತನ್ನ ತಾನು ಅರಿಯುವ ಅರಿವು ಬೀದಿಯಲ್ಲಿ ಹರಡುವಂಥದ್ದೇ ಅಂಗಡಿಯ ಬೊಕ್ಕಣಕ್ಕೆ ತುಂಬುವ ಹುರುಳಿಯೂ ಅಲ್ಲ, ಜ್ಞಾನ ಮರೆಯಾಗಿ ಇರುವಂಥದ್ದು ಶ್ರಮರಹಿತವಲ್ಲ. ಚೀಲದೊಳಗಣ ಜೀರಿಗೆಯಲ್ಲ, ಗಾಣದೊಳಗಣ ಹಿಂಡಿಯೆಲ್ಲ. ಜ್ಞಾನವನ್ನು ಎಲ್ಲರೊಡನೆ ಹೇಳದಿರಬೇಕು. ಕಾಲ ಬಂದಾಗ ಮಾತ್ರ ಜ್ಞಾನದ ಪ್ರಸಾರವಾಗಬೇಕೇ ಹೊರತು ತೋರಿಕೆಗೆ ಅಲ್ಲ. ವಾದವಿವಾದದಲ್ಲಿ ಗೆದ್ದಾಗ ಗೆದ್ದವ ಮತ್ತೆ ಚರ್ಚೆಗೆ ನಿಂತು ತನ್ನ ಗೆಲುವನ್ನು ಮತ್ತೆ ರುಜುವಾತುಪಡಿಸಬಾರದು, ಜಂಭಪಡಬಾರದು.

"ಚಿನ್ನಗಣೆಯ ಕಟ್ಟಿದವರೆಲ್ಲ
ಹೊನ್ನಿನ ನೋಡವಬಲ್ಲರೆ?
ಕರ್ಮಕೆ ಗುರಿಯಾದವರು
ನಿಮ್ಮನೆತ್ತ ಬಲ್ಲರೊ ಅಮುಗೇಶ್ವರಾ?"[೧]

ಹೊನ್ನು, ಚಿನ್ನಕ್ಕೆ ಆಸೆಪಟ್ಟವರೆಲ್ಲಾ ಹೊನ್ನಿಗಿಂತಲೂ ಅಧಿಕ ಬೆಲೆಯರಿತ ಶಿವನನ್ನು ಕಾಣಲು ಸಾಧ್ಯವೇ? ಲೌಕಿಕ ಆಸೆ ಆಮಿಷಗಳು ಇಂಗುವವರೆಗೆ ಶಿವನನ್ನು ಕಾಣಲು ಸಾಧ್ಯವಾಗುವುದಿಲ್ಲ. ಇವರೆಲ್ಲಾ ಇನ್ನೂ ಕರ್ಮಗಳನ್ನೇ ಗೆದ್ದಿಲ್ಲ. ಅದಕ್ಕೆ ಗುರಿಯಾಗಿ ಭವಬಂಧನದಲ್ಲೇ ತೊಳಲಾಡುತ್ತಿರುವವರು ಶಿವನ ನಿಲುವನ್ನು ಕಾಣರು ಎಂದಿದ್ದಾರೆ. ಶಿವನನ್ನು ಕಾಣಲು ಅರಿಷಡ್ವರ್ಗ ಗೆಲ್ಲಬೇಕೆಂಬ ನೀತಿಯಿದೆ.

"ಕಣ್ಣಿಗೆ ಬಂದಂತೆ ಅನ್ಯದೇಶಕ್ಕೆ ಹೋಗುವ ಕುನ್ನಿಗಳಿಗೆ
ಬಣ್ಣದ ಮಾತೇಕೇ?
ಕಾಮಕ್ರೋಧ ಲೋಭಮೋಹಮದ ಮತ್ಸರಂಗಳುಳ್ಳವಂಗೆ
ಮಹಾಜ್ಞಾನಿಗಳ ಮಾತೇಕೇ?
ಕತ್ತಲೆಯ ಕಳೆದು ನಿಶ್ಚಿಂತನಾದವಂಗೆ
ನೆಚ್ಚುಮೆಚ್ಚಿನ ರಚ್ಚೆಯ ಮಾತೇಕೇ?
ಅಮುಗೇಶ್ವರಲಿಂಗವನರಿದವಂಗೆ"[೨]

ಇಷ್ಟಲಿಂಗ ಬಿಟ್ಟು ಕಂಡ ಕಂಡ ದೇವರನ್ನು ಹರಸುತ್ತಾ, ಕಂಡಕಂಡಲ್ಲಿ ಹೋಗಿ ಮೋಕ್ಷ, ಮುಕ್ತಿಯ ಬಯಸುವವರಿಗೆ ಶಿವನ ತತ್ವದ ಮಾತುಗಳು ರುಚಿಸುವುದಿಲ್ಲ. ಅರಿಷಡ್ವರ್ಗಕ್ಕೆ ಗುರಿಯಾದವನು ಮಹಾಜ್ಞಾನಿಗಳ ಮಾತನ್ನು ಕೇಳುತ್ತಾನೆಯೇ? ಕತ್ತಲೆಯ

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೨೦೧, ವ. ೬೪೪
೨. ಅದೇ., ಪು. ೧೯೫, ವ. ೬೨೦

ಕಳೆದು ಅಜ್ಞಾನವನ್ನು ಹೋಗಲಾಡಿಸಿಕೊಂಡು ನಿತ್ಯನನ್ನು ಸಾಕ್ಷಾತ್ಕರಿಸಿದವನು ಯಾವ ಮರುಳು ಮಾತಿಗೂ ಗುರಿಯಾಗನು. ಆತನೇ ಅಮುಗೇಶ್ವರಲಿಂಗವನ್ನು ಅರಿತ ನಿಜವಾದ ಶರಣರು ಎಂದಿದ್ದಾರೆ.

ಹೀಗೆ ಅಮುಗೇಯ ರಾಯಮ್ಮ ತನ್ನ ವಚನಗಳಲ್ಲಿ ಜನ ಅನುಸರಿಸಬೇಕಾದ, ಲೋಕದಲ್ಲಿ ನಡೆದುಕೊಳ್ಳಬೇಕಾದ ವಿಷಯಗಳನ್ನು ನೈತಿಕ ನೆಲೆಗಟ್ಟನ್ನು ರೂಢಿಸಿಕೊಳ್ಳಬೇಕಾದ ಅಗತ್ಯತೆಯನ್ನು ಕುರಿತು ವಿವರಿಸಿದ್ದಾರೆ.

# ಅಧ್ಯಾಯ - ೭

# ರಾಯಮ್ಮನ ವಚನಗಳ ಒಟ್ಟು ಸಾಹಿತ್ಯಿಕ ವಿಶ್ಲೇಷಣೆ

೧೨ನೇ ಶತಮಾನದ ಪ್ರಮುಖ ಶಿವಶರಣೆಯಾದ ರಾಯಮ್ಮನ ವಚನಗಳನ್ನು ವಿಶ್ಲೇಷಣೆ ಮಾಡುತ್ತಾ ಕಂಡುಕೊಂಡ ಅಂಶಗಳೆಂದರೆ ಹೇಳಬೇಕಾದುದನ್ನು ನಿರ್ಭಯದಿಂದ ಹೇಳುವ ಛಲ ಈಕೆಯ ವಚನಗಳಲ್ಲಿ ಕಂಡುಬರುತ್ತದೆ. ವಿಡಂಬನೆ, ಅರಿವು, ಅನುಭಾವ, ಆತ್ಮನಿವೇದನೆ, ಲಿಂಗ ನೈತಿಕತೆ ಹೀಗೆ ಈಕೆಯ ವಚನಗಳನ್ನು ವಿಭಾಗಿಸಿ ಅಧ್ಯಯನಕ್ಕೆ ಒಳಪಡಿಸಿದಾಗ ಮೊದಲನೆಯದಾಗಿ ಬೇರೆ ವಚನಕಾರರಂತೆ ಕೆಲವು ಸಾಮ್ಯತೆ ಇರುವ ವಚನಗಳನ್ನು ಗುರುತಿಸಬಹುದಾಗಿದೆ.

"ಎನ್ನದೇಹವದಗ್ಧವ ಮಾಡಯ್ಯಾ
ಎನ್ನ ಕಾಯದಲ್ಲಪ್ಪ ಕರ್ಮವ ತೊಡೆಯಯ್ಯಾ
ಎನ್ನ ಭಾವದಲ್ಲಪ್ಪ ಭ್ರಮೆಯ ಜರಿಯಯ್ಯಾ
ನಾ ಹಿಡಿದ ಛಲವ ಬಿಡದೆ ನಡೆಸಯ್ಯಾ, ಅಮುಗೇಶ್ವರ ಲಿಂಗವೆ"[೧]

ದೇಹದಲ್ಲಿರುವ ದಗ್ಧತೆ ಅಂದರೆ ಅರಿಷಡ್ವರ್ಗಗಳೆಂಬ, ಕಾಯವಿಕಾರಗಳನ್ನು ತೊಳೆದು, ಭಾವವನ್ನು ನಿರ್ಭಾವಗೊಳಿಸಿ ಪರಾತ್ಪರ ವಸ್ತುವ ಅರಿಯುವ ಛಲವನ್ನು ಬಿಡದೆನಡೆಸು ಎಂಬ ವಚನ ಬಸವಣ್ಣನವರ

"ಎನ್ನ ಕಾಯಕ ದಂಡಿಗೆಯ ಮಾಡಯ್ಯ;
ಎನ್ನ ಸಿರವಸೋರೆಯ ಮಾಡಯ್ಯ;
ಎನ್ನ ನರವ ತಂತಿಯ ಮಾಡಯ್ಯ;
ಎನ್ನ ಬೆರಳಕಡ್ಡಿಯ ಮಾಡಯ್ಯ;
ಬತ್ತೀಸರಾಗವಹಾಡಯ್ಯ, ಉದರಲೊತ್ತಿ ಬಾರಿಸು ಕೂಡಲ ಸಂಗಮದೇವಾ"[೨]

ಎಂಬ ವಚನದೊಂದಿಗೆ ತಳುಕು ಹಾಕಬಹುದು. ಇಡೀ ದೇಹವನ್ನು ಶಿವನಾದಮಯವಾಗಿ ಮಾಡೆಂಬ ಆರ್ದನಾದವಿದೆ. ದಂಡಿಗೆ ಸಂಗೀತ ಉಪಕರಣ ಶಿರವನ್ನು ಅದರ ಸೋರೆಯಾಗಿ, ನರವನ್ನು ತಂತಿಯಾಗಿ, ಬೆರಳನ್ನು ತಂತಿಯ ನುಡಿಸುವ ಕಡ್ಡಿಯಾಗಿ ಮಾಡಿ ನನ್ನನ್ನು ನಿಮಗೆ ಒತ್ತಿ ನನ್ನಿಂದ ಬತ್ತೀ ಸರಾಗವನ್ನು ನುಡಿಸು ಎಂಬ ಶಿವನಾದಮಯವಾಗಿ ತನ್ನನ್ನು ಮಾಡೆಂಬ ಕೋರಿಕೆ ಇದೆ.

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೯೪, ವ. ೬೧೫
೨. ಬಸವಣ್ಣನವರ ವಚನ ಸಂಪುಟ ಸಂ. ಡಾ. ಎಂ.ಎಂ.ಕಲಬುರ್ಗಿ, ಪು. ೧೨೦, ವ. ೪೯೯

ವಿರಕ್ತನ ಬಗೆಗೆ ರಾಯಮ್ಮ ಮತ್ತು ಅಕ್ಕಮಹಾದೇವಿಯ ವಚನಗಳು ಸಾಮ್ಯತೆ ಪಡೆದಿವೆ

"ವಿರಕ್ತಿ ವಿರಕ್ತಿ ಎಂಬರು ವಿರಕ್ತಿಯ ಪರಿ ಎಂತುಂಡು ಹೇಳಿರಯ್ಯಾ
ಕಟ್ಟಿದ ಲಿಂಗವ ಕೈಯಲ್ಲಿ ಹಿಡಿದಿದ್ದರೆ ವಿರಕ್ತನೆ?
ಹುಟ್ಟು ಕೆತ್ತುವ ಮೊಂಬನಂತೆ
ಬಿಟ್ಟ ಮಂಡೆಯ ಕೇಶವ ನುಣ್ಣಿಸಿ ಬಣ್ಣಿಸಿ
ಎಣ್ಣೆಯ ಗಂಡ ಹಾಕಿದಡೆ ವಿರಕ್ತನೆ.....
ಹೆಣ್ಣು ಹೊನ್ನು ಮಣ್ಣು ಬಿಟ್ಟ
ಅಡವಿಯಾರಣ್ಯದಲ್ಲಿರ್ದಡೆ ವಿರಕ್ತನೆ ಅಲ್ಲ
ವಿರಕ್ತನ ಪರಿಯೆಂತೆಂದೊಡೆ
ಒಡಲ ಹುಡಿಗುಟ್ಟಿ, ಮೃತನೊಳೆಡದೆರಹಿಲ್ಲದಿರಬಲ್ಲಡೆ ವಿರಕ್ತನಪ್ಪನು"[೧]

ಈ ವಚನ ರಾಯಮ್ಮನ –

"ವಿರಕ್ತ ವಿರಕ್ತ ಎಂಬ ಹಾದಿಹಾರರ ವಿರಕ್ತರೆನ್ನಬಹುದೆ?
ಕಾವಿಯ ಹೊದ್ದು ತಿರುಗುವ ಜೀವಗಳಾರು ವಿರಕ್ತರೆ?
ನಾಮವ ಹೊತ್ತುಕೊಂಡು ತಿರುಗುವ ಗಾವಿಲರ ವಿರಕ್ತರೆಂದಡೆ
ಅಘೋರನರಕ ತಪ್ಪದು ಅಮುಗೇಶ್ವರಲಿಂಗವೆ"[೨]

ಎಂಬ ವಚನದೊಂದಿಗೆ ಹೋಲಿಸಬಹುದಾಗಿದೆ. ಇಬ್ಬರ ವಚನಗಳು ವಿರಕ್ತನಾದವನು ಹೇಗಿರಬೇಕು, ಕೇವಲ ವೇಷಾಚಾರಿಗಳನ್ನು ವಿರಕ್ತರೆನಲಾಗದೆಂದಿದ್ದಾರೆ. ಹೀಗೆ ವಚನಕಾರರಲ್ಲಿ ಕೆಲವು ಸಮಾನತೆಯ ವಚನಗಳು ಅಲ್ಲಲ್ಲಿ ಕಂಡುಬರುತ್ತವೆ.

ಎರಡನೆಯದಾಗಿ ಈಕೆಯ ವಚನಗಳ ಅಧ್ಯಯನ ಮಾಡುವಾಗ ಹಲವಾರು ಗಾದೆಗಳು, ನಾಣ್ನುಡಿಗಳು, ಉಪಮೆ, ರೂಪಕಗಳನ್ನು ಸಹಜವಾಗಿ ಬಳಸಿರುತ್ತಾರೆ. ಅವು ಆ ವಚನ ಸಂದರ್ಭಕ್ಕೆ ಹೇಳುಮಾಡಿಸಿದಂತೆ ಅನ್ವಯವಾಗುತ್ತವೆ. ಉದಾಹರಣೆಗೆ

"ಕತ್ತೆಯಂತೆ ಬತ್ತಲೆಯಿದ್ದಡೇನು ಇಷ್ಟಲಿಂಗ ಸಂಬಂಧಿಯಾಗಬಲ್ಲನೆ"?
"ಕುರಿಗಳಂತೆ ತಿರುಗುವ ಜಡರುಗಳ ಅನುಭಾವಿಗಳೆಂಬೆನೆ"?
"ಕುಂಜರನ ವೇಷವ ತೊಟ್ಟ ಹಂದಿಯಂತೆ ತಿರುಗುವ ಅಜ್ಞಾನಿಗಳೆಂಬೆನೆ"
"ಕೊಂಬಿನ ಕುರಿಯಂತೆ ಕೂಗಿದಡೇನು, ಲಿಂಗೈಕ್ಯರಾಗಬಲ್ಲರೆ"?

---

೧. ಶಿ.ಶ.ವ.ಸಂ. ವೀರಣ್ಣ ರಾಜೂರ, ಪು. ೧೯೦, ವ. ೩೬೮
೨. ಅದೇ., ಪು. ೨೧೨, ವ. ೬೮೫

"ಮಾಗಿಯ ಕೋಗಿಲೆಯಂತೆ ಮೋರೆಯ ತೋರೆನು"

"ಕತ್ತೆಯ ಮರಿಗೆ ಸುಪ್ಪತ್ತಿಗೆಯ ಹಾಸುವರೆ"?

"ಕುಂಜರನ ವೇಷವ ತೊಟ್ಟು ಹಂದಿಯಂತೆ ತಿರುಗುವ"

"ಸೂಳೆಯ ಮನೆಯಲ್ಲಪ್ಪ ಗಾವುಡಿಯಂತೆ"

"ಸತ್ತಹಂದಿಯ ತಿಂಬ ನಾಯಿ ಬೆಳುದಿಂಗಳಬಲ್ಲುದೆ"?

"ಕಾಗೆಯ ಮರಿ ಕೋಗಿಲೆಯಾಗಬಲ್ಲುದೆ?"

"ಕೆಸರಿನೊಳಗಣ ಹುಲ್ಲ ಮೇಯ ಹೋದ ಪಶುವಿನಂತೆ"

ಹೀಗೆ ಅನೇಕ ಪ್ರಾಣಿ ರೂಪಕಗಳ ಮೂಲಕ ಸಮಾಜದಲ್ಲಿದ್ದ ಡಂಬಾಚಾರ, ಅಂಧಶ್ರದ್ಧೆ, ಅಸಮಾನತೆ, ಭವಿಗಳನ್ನು, ಕೋಪದಿಂದ, ನೇರವಾಗಿ ಟೀಕಿಸಿರುವುದಲ್ಲದೆ ತಿದ್ದಲೂ ಪ್ರಯತ್ನಿಸಿರುತ್ತಾರೆ. ಈಕೆಯ ವಚನಗಳ ಒರಟುತನವನ್ನು ಕುರಿತು ಚಿದಾನಂದಮೂರ್ತಿಗಳು "ರಾಯಮ್ಮನ ಭಾಷೆಯ ಒರಟುತನವೇ ಅವಳ ಅಭಿವ್ಯಕ್ತಿಗೆ ನಾವೀನ್ಯತೆಯನ್ನು ತರುತ್ತದೆ"[೧] ಎಂದಿದ್ದಾರೆ.

ಆಕೆಯ ವಚನಗಳಲ್ಲಿ ಕೆಲವು ಗಾದೆಯ ನುಡಿಗಳೂ ಕಂಡುಬರುತ್ತವೆ.

"ಮೂಗಿಲ್ಲದವಂಗೆ ಕನ್ನಡಿಯ ತೋರಲೇಕೆ"?

"ಕೈಯಿಲ್ಲದವಂಗೆ ಕುದುರೆಯನೇರಲೇಕೆ"?

"ಬೆಕ್ಕು ಹಾಲು ಕುಡಿದಂತೆ"?

"ಉಂಡಮನೆ ದೂರುವ ಒಡೆಕಾರ"

"ಅರೆಯ ಮೇಲೆ ಮಳೆ ಹೋಯಿದಂತೆ

"ಪುರುಷವುಳ್ಳವರಾಗಿ ಪಾಷಾಣದ ಹಂಗುಂಟೆ"?

ಒಟ್ಟಾರೆಯಾಗಿ ಅಮುಗೆರಾಯಮ್ಮ ತನ್ನ ಕಠಿಣವಾದ ಬಿರುಸು, ವ್ಯಂಗ್ಯ ವಿಡಂಬನೆ, ದಿಟ್ಟತನದಿಂದ ಸಮಾಜವನ್ನು ಕೆಚ್ಚೆದೆಗಾರಿಕೆಯಿಂದ ಎಚ್ಚರಿಸುವ ಪ್ರಯತ್ನ ಮಾಡಿರುತ್ತಾರೆ. ಒಬ್ಬ ಮಹಿಳೆ ಈ ರೀತಿ ತನ್ನ ಅಭಿಪ್ರಾಯವನ್ನು ಒಕ್ಕೊರಲಿನಿಂದ ಅಭಿವ್ಯಕ್ತಪಡಿಸಿದುದು ಅಂದಿನ ಕಾಲಘಟ್ಟದಲ್ಲಿಯೇ ಮಹಿಳೆಯರು ಸಮಕಾಲೀನತೆಗೆ ತೆರೆದುಕೊಂಡ ಬಗೆಯನ್ನು ಸೂಚಿಸುತ್ತದೆ. ಇಂಥ ಮಹಿಳಾ ಅಭಿವ್ಯಕ್ತಿಗೆ ವೇದಿಕೆಯನ್ನು ಕಲ್ಪಿಸಿಕೊಟ್ಟವರು ಅಂದಿನ ವಚನಕಾರರು ಎಂಬುದರಲ್ಲಿ ಎರಡು ಮಾತಿಲ್ಲ.

---

೧. ವಚನಸಾಹಿತ್ಯ, ಚಿದಾನಂದಮೂರ್ತಿ, ಪು. ೧೪೪

# ಉಪಸಂಹಾರ

೧೨ನೇ ಶತಮಾನದ ಈ ಶರಣ ಚಳುವಳಿ, ವಚನ ಚಳುವಳಿ ಜಾಗತಿಕ ಮಟ್ಟದಲ್ಲಿ ಸ್ಥಾನಮಾನ ಪಡೆಯದೇ ಹೊದುದು ವಿಪರ್ಯಾಸವೇ ಸರಿ. ಬಸವಾದಿ ಶರಣರ ಚಿಂತನೆಗಳು ಸಾವಿರ ವರ್ಷಗಳ ಮುಂದಿನ ಆಲೋಚನೆಗಳನ್ನು ಒಳಗೊಂಡಿದುದು ವಿಶೇಷ. ಬಸವಾದಿ ಪ್ರಮಥರ ಈ ವೈಚಾರಿಕ ಕ್ರಾಂತಿಯ, ಸಾಮಾಜಿಕ ಅಸಮಾನತೆಯನ್ನು ಪ್ರಶ್ನಿಸುವ ವಚನಕಾರರು ಸ್ತ್ರೀಯರಿಗೂ ಸಮಾನ ಪ್ರಾಶಸ್ತ್ಯ ನೀಡಿದವರು. ಅವರ ಪ್ರಧಾನ ಆಶಯ ಸ್ತ್ರೀಯರು. ಸ್ತ್ರೀಯರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯ ನೀಡಿದ ಶರಣರ ಆಧ್ಯಾತ್ಮಿಕ, ಕಾಯಕ ಸಮಾನತೆ ನೀಡಿದರು. ಅಂದು ಅವರು ನೀಡಿದ ಚಿಂತನೆಗಳನ್ನೇನಾದರೂ ಅನ್ವಯ ಮಾಡಿಕೊಂಡು ಆಚರಣೆಗೆ ತಂದರೆ ಭ್ರಷ್ಟಾಚಾರ, ಜಾತಿಸಮಸ್ಯೆ, ಅಸ್ಪೃಶ್ಯತೆ, ಸ್ತ್ರೀ-ಪುರುಷರ ಅಸಮಾನತೆ ಎಂಬ ಹತ್ತು ಹಲವಾರು ಸಾಮಾಜಿಕ ಪಿಡುಗುಗಳಿಗೆ ದಿವ್ಯೌಷಧವಾಗಿದೆ.

ಕಲ್ಯಾಣದಲ್ಲಿ ಕ್ರಾಂತಿಯಾದಾಗ ಹಲವು ಶರಣರೆಲ್ಲಾ ಗುಂಪುಗುಂಪಾಗಿ ಅಲ್ಲಲ್ಲಿ ಚದುರಿಹೋದರು. ತಾವು ರಚಿಸಿದ ಅಮೂಲ್ಯ ವಚನಗ್ರಂಥಗಳೊಂದಿಗೆ ಹರಿದುಹಂಚಿಹೋದರು. ಕೆಲವು ಮಹಿಳೆಯರ ಒಂದೊಂದೇ ವಚನಗಳು ದೊರೆತಿವೆ. ಈ ಸಂಗ್ರಹ ಸಂಪಾದನೆಯ ಕೆಲಸ ಅಷ್ಟು ಸುಲಭವಲ್ಲ. ಹುಳುಬಿದ್ದ ತಾಳೆಗರಿಗಳೆಷ್ಟೋ, ಮುರಿದುಹೋದವೆಷ್ಟೋ – ಅವುಗಳನ್ನೆಲ್ಲಾ ಒಕ್ಕಣೆ ಮಾಡಿ ನಮ್ಮ ಮುಂದೆ ಸಿದ್ಧರೂಪಕ್ಕೆ ತಂದಿರುವಲ್ಲಿ ಹಲವು ವಿದ್ವಾಂಸರುಗಳ ಶ್ರಮವಿದೆ. 'ವಚನಸಾಹಿತ್ಯ ಪಿತಾಮಹ'ರೆಂದು ಖ್ಯಾತರಾದ 'ಫ.ಗು.ಹಳಕಟ್ಟಿ' ತಮ್ಮ ಜೀವಮಾನವನ್ನೇ ವಚನಸಾಹಿತ್ಯದ ಅಧ್ಯಯನಕ್ಕಾಗಿ ಮೀಸಲಿರಿಸಿದ ಮಹಾನುಭಾವರು. ನಂತರ ಆರ್.ಸಿ.ಹಿರೇಮಠ, ಭೂಸನೂರುಮಠ, ಸ.ಸ.ಮಾಳವಾಡ, ಎಲ್.ಬಸವರಾಜು, ಎಂ.ಎಂ.ಕಲಬುರ್ಗಿ, ಚಿದಾನಂದಮೂರ್ತಿ ಮುಂತಾದ ಸಂಶೋಧಕರು ಈ ನೆಲೆಯಲ್ಲಿ ಶ್ರಮಗೈದಿರುತ್ತಾರೆ. ವಚನಕಾರರ ತತ್ವಾದರ್ಶಗಳು, ಆಧ್ಯಾತ್ಮಿಕತೆ, ಚರ್ಚಾಗೋಷ್ಟಿ ವೈಚಾರಿಕತೆ, ಮಹಿಳೆಯರ ಸ್ಥಾಮಾನ, ಕಾಯಕ ಸಿದ್ಧಾಂತ, ದಾಸೋಹ, ಅನುಭಾವ ಇವುಗಳ ಕುರಿತು ಚಿಂತನೆಯ ಜೊತೆಗೆ ಮಹಿಳಾ ವಚನಕಾರ್ತಿಯಾದ ಅಮುಗೆ ರಾಯಮ್ಮನನ್ನು ಕುರಿತ ಹಿನ್ನೆಲೆ, ಆಕೆಯ ವಚನಗಳ ವೈಶಿಷ್ಟ್ಯತೆಯನ್ನು ಈ ನಿಬಂಧನೆಯಲ್ಲಿ ಪ್ರಸ್ತುತಪಡಿಸಲಾಗಿದೆ. ಆಕೆಯು ಪ್ರಸ್ತಾಪಿಸಿರುವ ವಿಡಂಬನೆ, ಡಂಬಾಚಾರ, ವೇಷಧಾರಿಗಳು, ಭವಿಗಳನ್ನು ಕುರಿತು ವಿಡಂಬನೆ, ತಿರುಗಾಟ, ಲಿಂಗ, ಅನುಭಾವ ಆತ್ಮನಿವೇದನೆಯಂತಹ ವಚನಗಳ ವಿಶ್ಲೇಷಣೆ ಮಾಡಲಾಗಿದೆ. ಒಬ್ಬ ಸಾಮಾನ್ಯ ನೇಯ್ಗೆಕಾಯಕ ಅಮುಗಿದೇವಯ್ಯನ ಪತ್ನಿ ರಾಯಮ್ಮನೂ ತನ್ನ ಆಧ್ಯಾತ್ಮಿಕ ಅತ್ಯುನ್ನತ ನಿಲುವಿನಲ್ಲಿ ತಾನು ಕಂಡ ಅಂತರಂಗದ ಅನುಭಾವವನ್ನು, ಲೌಕಿಕ

ಡಂಬಾಚಾರಗಳನ್ನು ನಿರ್ಭಯದಿಂದ ಹೇಳಿದುದು ಮಹಿಳೆಯರಿಗೆ ವಚನಕಾರರು ನೀಡಿದ ಅಭಿವ್ಯಕ್ತಿ ಸ್ವಾತಂತ್ರ್ಯವಾಗಿದೆ.

ಶರಣರ ದೇಹದ ಮೇಲೆ ಲಿಂಗ ಧರಿಸುವುದು, ಶಿವತತ್ವಾಚಾರಣೆಗಳು ಇವೆಲ್ಲಾ ಆ ಕಾಲದಲ್ಲಿಯೇ ಸ್ಥಾಪಿತ ಸಿದ್ಧಾಂತಗಳೇನಲ್ಲ. ಮೊದಲೇ ಇದ್ದ ಈ ಆಚರಣೆಗಳನ್ನು ತಮ್ಮ ಧಾರ್ಮಿಕ ಭಾವನೆಗಳಿಗೆ ತಕ್ಕಂತೆ ಬದಲಾಯಿಸಿಕೊಂಡು ವಿಶಿಷ್ಟ ಆಚರಣೆಗಳನ್ನು ಜಾರಿಗೆ ತಂದರು. ಈ ನೂತನ ಆಚರಣೆಗಳು ಮೇಲ್ವರ್ಗದವರಿಗೆ ಬೇಕಿರಲಿಲ್ಲ. ಮನುಷ್ಯ ಸಮಾಜದಲ್ಲಿ ಬದುಕಬೇಕಾದರೆ ಹೇಗೆ ಸದ್ವಿನಯ, ಸದಾಚಾರಗಳನ್ನು ಮೈಗೂಡಿಸಿಕೊಂಡು, ಭವಬಂಧನಗಳಿಂದ ಬಿಡುಗಡೆಹೊಂದಿ ಹೇಗೆ ಆದರ್ಶಯುತವಾಗಿ ಬದುಕಬೇಕೆಂದು ಸ್ವತಃ ತೋರ್ಪಡಿಸಿರುತ್ತಾರೆ. ಸದಾ 'ಮುಗಿದಕೈ, ಬಾಗಿದ ತಲೆಯಾಗಿದ್ದ' ಶರಣರ ನಿಲುವು ಅನುಕರಣೀಯವಾದವುಗಳು.

ಒಟ್ಟಾರೆ ಅಮುಗೆಯ ರಾಯಮ್ಮನ ವಚನಗಳು. ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯ ಕೊಡುಗೆಗಳಾಗಿವೆ. ಆಕೆಯ ವಚನಗಳನ್ನು ಅಧ್ಯಯನ ನಡೆಸಿದ ಬಳಿಕ ಆಕೆಯು ಡಂಬಾಚಾರಿಗಳಿಗೆ ನಿಷ್ಠುರವಾಗಿ ತೆಗಳಿದ ಸಂದರ್ಭ, ವಚನಗಳು ಸದಾ ಕಣ್ಣ ಮುಂದೆ ಬರುತ್ತವೆ. ಶಿವನ, ಲಿಂಗದ ಪರಮಭಕ್ತೆಯ ಅಭಿನ್ನ ನಿಲುವನ್ನು, ನಿಷ್ಠೆಯನ್ನು ಇವರ ವಚನಗಳು ಕಟ್ಟಿಕೊಡುತ್ತವೆ.

## ಪರಾಮರ್ಶನ ಗ್ರಂಥಗಳು


೧. ವಚನಸಾಹಿತ್ಯ — ಡಾ. ಶಿವಾನಂದ ಕೆಲಗಿನಮನಿ, ೨೦೦೧, ಚೇತನಮುಕ್ ಹೌಸ್, ಮೈಸೂರು

೨. ವಚನಸಾಹಿತ್ಯ ಮತ್ತು ದಾಸಸಾಹಿತ್ಯಗಳ ಸಮೀಕ್ಷೆ — ಡಾ. ಎನ್.ಎನ್.ಚಿಕ್ಕಮಾದು ೨೦೧೧, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

೩. ವಚನ ಧರ್ಮಸಾರ — ಎಂ.ಆರ್.ಶ್ರೀನಿವಾಸಮೂರ್ತಿ ೨೦೦೯, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೪. ವಚನಕಾರ್ತಿಯರು — ಡಾ. ಎಂ.ಎಸ್.ವೇದಾ ೨೦೧೧, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೫. ವಚನಸಾಹಿತ್ಯ ಮತ್ತು ಮಹಿಳೆ — ಡಾ. ಶೈಲಜಾ ಉಡಚಣ ೨೦೦೭, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೬. ಶಿವಶರಣೆಯರ ವಚನ ಸಂಪುಟ (ಸಂ.) — ಡಾ. ವೀರಣ್ಣರಾಜೂರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧.

೭. ಸಮಾಜ ವಿಕಾಸಕ್ಕೆ ಶರಣ ಸಂಸ್ಕೃತಿ — ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ ೨೦೧೩, ಸಪ್ನಬುಕ್ ಹೌಸ್, ಬೆಂಗಳೂರು

೮. ವಚನಕಾರ್ತಿ ರಾಯಮ್ಮ — ಡಾ. ಜಯಶ್ರೀ ದಂಡೆ ೧೯೯೮, ಬಸವಾದಿ ಶರಣ ಸಾಹಿತ್ಯ ಕೇಂದ್ರ ಗುಲಬರ್ಗಾ.

೯. ಬಸವೇಶ್ವರ ವಚನ ದೀಪಿಕೆ — ಡಾ. ಎಚ್.ತಿಪ್ಪೇರುದ್ರಸ್ವಾಮಿ ೧೯೯೫, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೧೦. ಬಸವಣ್ಣನವರ ವಚನ ಸಂಪುಟ(ಸಂ.) — ಡಾ. ಎಂ.ಎಂ.ಕಲಬುರ್ಗಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧.

೧೧. ವಚನಗಳಲ್ಲಿ ಸತಿಪತಿ ಭಾವ — ಡಾ. ಎಂ.ಎಸ್.ವೇದಾ, ೨೦೧೧, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೧೨. ಸ್ವರವಚನಗಳು: ಒಂದು ಸಂಗೀತಾತ್ಮಕ ಅಧ್ಯಯನ — ಡಾ. ಸರ್ವಮಂಗಳಾ ಶಂಕರ್, ೨೦೦೫, ತರಳಬಾಳು ಮುದ್ರಣಾಲಯ, ಚಿತ್ರದುರ್ಗಜಿಲ್ಲೆ

೧೩. ಶರಣರ ಆಯ್ದ ವಚನಗಳ ವ್ಯಾಖ್ಯಾನ (ವಚನ ವ್ಯಾಖ್ಯಾನಮಾಲೆ, ಸಂಪುಟ-೯) — ಡಾ. ಜಯಶ್ರೀದಂಡೆ, ೨೦೦೯, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೧೪. ವಚನ ಪರಿಭಾಷಾಕೋಶ (ಸಂ) — ಡಾ. ಎನ್.ಜಿ.ಮಹಾದೇವಪ್ಪ, ೨೦೦೧, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೫. ವಚನಸಾಹಿತ್ಯ — ಎಂ.ಚಿದಾನಂದಮೂರ್ತಿ ೨೦೦೯, ಸಪ್ನ ಬುಕ್‌ಹೌಸ್, ಬೆಂಗಳೂರು

* * * * *

